ಭಕ್ತಿವಿಜಯ ಕೋಶಸಂಖ್ಯೆ ೨

# ಇಂದ್ರಕೀಲವಿಜಯನಾಟಕ

ನಾರ್ಮಲ್ ಸ್ಕೂಲ್ ಕರ್ಣಾಟಕಪಂಡಿತರಾದ

ಮೈಸೂರು ಸೀತಾರಾಮಶಾಸ್ತ್ರಿಗಳಿಂದ

ವಿರಚಿತವಾದುದು

ಮತ್ತು ಇವರಿಂದ ಪ್ರಕಟಿಸಲ್ಪಟ್ಟುದು

ಶ್ರೀನಿವಾಸ ಪ್ರೆಸ್,

ಮೈಸೂರು

೧೯೧೨

ರಿಜಿಸ್ಟರ್ಡ್ ಕಾಪಿರೈಟ್] [ಬೆಲೆ ೧ ೪ ೦

# ಸೂಚನೆ

ಭಕ್ತಿವಿಜಯವಮಾಸಪುಸ್ತಕರೂಪವಾಗಿ ಪ್ರಕಟಿತವಾದ ಎರಡನೆಯ ಸಂಖ್ಯೆಯುಳ್ಳ ಈ ಗ್ರಂಥವು ಮೊದಲಿಂದ ಕಡೆಯವರೆಗೆ ಕೆ ನರಸಿಂಹಯ್ಯನವರ ಮುದ್ರಾಕ್ಷರಶಾಲೆಯಲ್ಲಿಯೂ ಉಪೋದ್ಘಾತ ಸಹಿತವಾದ ಇದರ ಮುಖಪತ್ರವು ಶ್ರೀನಿವಾಸಮುದ್ರಾಕ್ಷರಶಾಲೆಯಲ್ಲಿಯೂ ಮುದ್ರಿಸಲ್ಪಟ್ಟಿದೆ

---

ಓದುವವರು ದಯೆಯಿಟ್ಟು ಇದನ್ನು ಅವಧರಿಸುವುದು

೧೭ ನೆಯ ಪದ್ಯದಲ್ಲಿ " ನೃಪಕುಲತಿಲಕಾ '' ಎಂಬುದಕ್ಕೆ ಬದಲಾಗಿ " ನೃಪತಿಲಕಾ'' ಎಂದಿರಬೇಕು

೪೭ ನಯ ಪದ್ಯವಾದ ಬಳಿಕ - ಧೌಮ್ಯಂ ಮಹಾರಾಜನೆ ' ಸುಜ್ಞಾನಮೂರ್ತಿಯಾದ ನಿನಗೆ ದೇವತಾನುಗ್ರಹಂ ಸುಲಭತರವಲ್ತೆ ?—ಎಂಬ ಮಾತಿರಬೇಕು

ಕಡೆಯಲ್ಲಿರುವ ಶೋಧನಪತ್ರದೊಡನೆ ಇದನ್ನು ಸೇರಿಸಿಕೊಳ್ಳುವುದು

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಪೆಳುರುತೆ | ಪೆಳರುತೆ | ೧೩ | ೨ |
| ಬಂದೆಪೆವು | ಬಂದಪೆವು | ೨೧ | ೧೪ |
| ಮದುಪ | ಮುದುಪ | ೪೭ | ೧೨ |
| ಸಾಸರ್ಗದಿರ | ಸಾಸಿರ್ಗದಿರ | ೫೦ | ೧೮ |
| ಪೆರೆತು | ಪೆರತು | ೭೨ | ೪ |
| ಬಲ್ಲದು | ಬಲ್ಲುದು | ೮೩ | ೪ |
| ಪಾಥಾವಧಾನ | ಪಾದಾವಧಾನ | ೧೨೮ | ೧೪ |
| ಒಡರಿಸಲ್ | ಒಡರಿಸಲ್ | ೧೪೨ | ೨೩ |
| ಮಚ್ಚುಗು | ಮಚ್ಚುಗುಂ | ೧೭೧ | ೨೦ |

# ಉಪೋದ್ಘಾತ

---

ಕನ್ನಡದಲ್ಲಿ ಲಾಕ್ಷಣಿಕರಾದ ಹಿಂದಣ ಕವಿಗಳಿಂದ ರಚಿಸಲ್ಪಟ್ಟ ನಾಟಕಗಳು ಯಾವುವೂ ಪ್ರಾಯಶಃ ಕಾಣಬರುವುದಿಲ್ಲ. ಎರಡುಶತಮಾನದ ಹಿಂದೆ ಸಿಂಗರಾರ್ಯಕವಿಯಿಂದ ರಚಿತವಾದ ಮಿತ್ರವಿಂದಾಗೋವಿಂದವೆಂಬುದೊಂದೇ ಪ್ರಸಿದ್ಧವಾಗಿರುವುದು. ಇದೂ ಹೊಸತಲ್ಲ, ಸಂಸ್ಕೃತದಲ್ಲಿ ಶ್ರೀಹರ್ಷಕವಿಯಿಂದ ರಚಿತವಾದ ರತ್ನಾವಳಿಯೆಂಬ ನಾಟಿಕೆಯ ಭಾಷಾಂತರವು. ಈಚೆಗೆ ಎಷ್ಟೋ ನಾಟಕಗಳು ಬರೆಯಲ್ಪಟ್ಟಿವೆ, ಇವುಗಳಲ್ಲಿ ಕೆಲವು ಸಂಸ್ಕೃತದಿಂದಲೂ ಕೆಲವು ಆಂಗ್ಲೇಯಭಾಷೆಯಿಂದಲೂ ಪರಿವರ್ತಿಸಲ್ಪಟ್ಟಿರುವುವು. ಕೆಲವು ಹೊಸತಾಗಿಯೆ ರಚಿಸಲ್ಪಟ್ಟಿರುವುವು. ಸಂಸ್ಕೃತದಿಂದ ಪರಿವರ್ತಿಸಲ್ಪಟ್ಟಿರುವುವು ಲಕ್ಷಣಬದ್ಧಗಳಾಗಿಯೇ ಇರುವುವು, ಆದರೆ ಇವು ಸರ್ವಸಾಧಾರಣವಾದ ವ್ಯವಹಾರದ ಭಾಷೆಯಲ್ಲಿ ಬರೆಯಲ್ಪಟ್ಟಿವೆ. ಪ್ರಾಯಶಃ ಹೊಸತಾಗಿ ಬರೆಯಲ್ಪಟ್ಟಿರುವವುಗಳಲ್ಲಿ ನಾಟಕಲಕ್ಷಣವೂ ಭಾಷಾಶುದ್ಧಿಯೂ ಇಲ್ಲ, ಸರ್ವಸಾಧಾರಣವಾಗಿ ಓದುವುದಕ್ಕೆ ಅನುಕೂಲವಾಗಿವೆ. ನಾಟಕದಲ್ಲಿ ಅನೇಕಲಕ್ಷಣಗಳಿರಬೇಕಾದುದರಿಂದ ಇವರ ರಚನೆ ಸುಲಭವಲ್ಲ. ಉಕ್ತಿಪ್ರತ್ಯುಕ್ತಿಗಳಿದ್ದ ಮಾತ್ರಕ್ಕೆ ನಾಟಕವೆನಿಸುವುದಿಲ್ಲ. ಈ ನಿರ್ಬಂಧದಿಂದಲೇ ಕನ್ನಡದಲ್ಲಿ ಲಕ್ಷಣಬದ್ಧಗಳಾದ ನಾಟಕಗಳು ಹೆಚ್ಚಾಗಿಲ್ಲ. ಇಂತಹ ನಾಟಕಗಳ ರಚನೆಯಲ್ಲಿ ಅಭಿಜ್ಞರು ಹೆಚ್ಚಾಗಿ ಲಕ್ಷ್ಯವಿಡಬೇಕು.

ಕ್ರಿಸ್ತಶಕ ೧೮೯೬ರಲ್ಲಿ ನಾನು ಸಂಸ್ಕೃತದಿಂದ ಪರಿವರ್ತಿಸಿ ಮುದ್ರಣಗೊಳಿಸಿದ ಪಾರ್ವತೀಪರಿಣಯನಾಟಕದ ಪೀಠಿಕೆಯಲ್ಲಿ ಇಂದ್ರಕೀಲವಿಜಯವೆಂಬ ನಾಟಕವನ್ನು ಬರೆದಿರುವೆನೆಂದು ಸೂಚಿಸಿರುವೆನು. ಆಗಲೇ ಇದು ಬರೆಯಲ್ಪಟ್ಟಿದ್ದಿತು. ಆದರೂ ಈಚೆಗೆ ಬಹುವಾಗಿ ಸಂಸ್ಕರಿಸಲ್ಪಟ್ಟಿರುವುದು. ಅಷ್ಟು ಸಂಸ್ಕರಿಸಲ್ಪಟ್ಟಿದ್ದರೂ ರಸಜ್ಞರಾದ ವಿದ್ವಾಂಸರು ಪರಿಶೀಲಿಸಿ ಒಪ್ಪುವವರೆಗೂ ತೃಪ್ತಿಕರವಾಗಿದೆಯೆಂದು ಹೇಳಲಾಗುವುದಿಲ್ಲ. ಸುಪ್ರಸಿದ್ಧರಾದ ನನ್ನ ಸಾಹಿತ್ಯವಿದ್ಯಾಗುರುಗಳು ಈ ನಾಟಕವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಅನುಗ್ರಹಿಸಿರುವರು. ಇವರ ಅನುಗ್ರಹವಿಲ್ಲದಿದ್ದರೆ ಇದು ಈ ರೂಪವಂ ಪಡೆಯುತ್ತಿರಲಿಲ್ಲ. ಮುದ್ರಿತವಾಗುವುದಕ್ಕೆ ಮೊದಲೇ ಇದನ್ನು ಪ್ರೀತಿಯಿಟ್ಟು ನೋಡಿ ಕೆಲವು ಅಭಿಪ್ರಾಯಗಳನ್ನು ತಿಳಿಯಿಸಿದ ನನ್ನ ಸನ್ಮಿತ್ರರಾದ ಮ|| ರಾ|| ಎಸ್. ತಿಮ್ಮಪ್ಪಯ್ಯಶಾಸ್ತ್ರಿಗಳ ವಿಷಯದಲ್ಲಿ ಅತ್ಯಂತಕೃತಜ್ಞನಾಗಿರುವೆನು.

ಇಂದ್ರಕೀಲವಿಜಯವೆಂದರೆ,-ಇಂದ್ರಕೀಲಪರ್ವತದಲ್ಲಿ ಅರ್ಜುನನಿಗೆ ಉಂಟಾದ ಈಶ್ವರಾನುಗ್ರಹರೂಪವಾದ ವಿಜಯ—ಎಂದರ್ಥ ಅರ್ಜುನನು ಇಂದ್ರಕೀಲಪರ್ವತವಲ್ಲಿ ಪರಮೇಶ್ವರನಂ ಕುರಿತು ತಪಸ್ಸನ್ನುಮಾಡಿ ಆ ಸ್ವಾಮಿಯ ಅನುಗ್ರಹವಂ ಪಡೆದ ಕಥೆಯೇ ಈ ನಾಟಕದಲ್ಲಿ ಮುಖ್ಯವಾಗಿ ಪ್ರತಿಪಾದಿಸಲ್ಪಟ್ಟಿರುವುದರಿಂದ ಇದಕ್ಕೆ ಇಂದ್ರಕೀಲವಿಜಯವೆಂದುಹೆಸರು

ಮುಖ್ಯವಾಗಿ ಈ ನಾಟಕವು ಓದುವರಿಗೆ ವ್ಯುತ್ಪಾದಕವಾಗಿರಬೇಕೆಂಬ ಉದ್ದೇಶದಿಂದಲೇ ರಚಿಸಲ್ಪಟ್ಟಿರುವುದು ಇದು ಶಬ್ದಮಣಿದರ್ಪಣ ಶಬ್ದಾನುಶಾಸನಾನುಸಾರವಾದ ಅನೇಕಮುಖ್ಯ ವ್ಯಾಕರಣಸಂಗತಿಗಳನ್ನು ಒಳಕೊಂಡಿವೆ ಇವರಲ್ಲಿ ಅಪೂರ್ವವಾದ ಅನೇಕಪದಗಳು ಪ್ರಯೋಗಿಸಲ್ಪಟ್ಟವೆ ಪದ್ಯಗಳು ಱಳಕುಳನಿಯಮವನ್ನು ಅನುಸರಿಸಿಯೇ ಬರೆಯಲ್ಪಟ್ಟವೆ , ಆದರೆ ಈ ಗ್ರಂಥವನ್ನು ಮುದ್ರಿಸಿದ ಮುದ್ರಾಕ್ಷರಶಾಲೆಯಲ್ಲಿ ಱಳಾಕ್ಷರಗಳು ಇರಲಿಲ್ಲವಾದುದರಿಂದ ಪದ್ಯಗಳ ಪ್ರಾಸಸ್ಥಾನಗಳಲ್ಲಿಯೂ ಇತರಸ್ಥಾನಗಳಲ್ಲಿಯೂ ಱಳಗಳಿಗೆ ಬದಲಾಗಿ ರೇಫಳಕಾರಗಳನ್ನೇ ಉಪಯೋಗಿಸಬೇಕಾಯಿತು ವಿಶೇಷಜ್ಞರು ಅಲ್ಲಲ್ಲಿ ಅವುಗಳ ಭೇದವನ್ನು ಅವಧರಿಸಬಹುದು ಈ ನಾಟಕದಲ್ಲಿ ಅನೇಕನೀತಿವಿಷಯಗಳು ಗರ್ಭಿತವಾಗಿವೆ ಭಕ್ತಿರಸವು ತುಂಬಿತುಳುಕಾಡುತಿದೆ ಇದನ್ನು ಓದುವುದರಿಂದ ವಿದ್ಯಾರ್ಥಿಗಳು ವಿಶೇಷಪ್ರಯೋಜನವನ್ನೂ ಗುಣಜ್ಞರಾದ ವಿದ್ವಾಂಸರು ವಿಶೇಷಪರಿತೋಷವನ್ನೂ ಪಡೆಯದಿರರೆಂದು ನಾನು ತಿಳಿದಿರುವೆನು ಅಂತು, ಓದಿದವರು ಸ್ವಲ್ಪಪ್ರಯೋಜನವನ್ನಾದರೂ ಅಲ್ಪಪರಿತೋಷವನ್ನಾದರೂ ಪಡೆದರೆ ಆಗ ನನ್ನ ಶ್ರಮವು ಸಫಲವೆಂದು ಭಾವಿಸುವೆನು

ಘನತೆವಡೆದ ಮದ್ರಾಸ್ ಯೂನಿವರ್ಸಿಟಿಯವರು ಇದನ್ನು ಅಚ್ಚಾಗುತಿರುವಾಗಲೇ ಮುಂದಣಸಂವತ್ಸರದ ಬಿ ಎ ಪರೀಕ್ಷೆಗೆ ಪಠನೀಯ ಗ್ರಂಥವನ್ನಾಗಿ ಪರಿಗ್ರಹಿಸಿರುವುದು ಇದರ ಅಭ್ಯುದಯವಂ ಸೂಚಿಸುವುದು

ಈ ನಾಟಕದ ಸಂಗತಿಯನ್ನು ಲಾಲಿಸಿ ಉದಾರಭಾವದಿಂದ ಇದರ ಮುದ್ರಣಕ್ಕೋಸ್ಕರ ದ್ರವ್ಯಸಾಹಾಯ್ಯವಂ ಮಾಡಿದ ಸುಗೃಹೀತನಾಮಧೇಯರೂ ವಿದ್ಯಾಭಿಮಾನಿಗಳೂ ಆದ ಮ॥ರಾ॥ ಸರದಾರ್ ಎಮ್ ಕಾಂತರಾಜ ಅರಸಿನವರ ವಿಷಯದಲ್ಲಿ ನಾನು ಅತ್ಯಂತಕೃತಜ್ಞನಾಗಿರುವೆನು

೧೨ ೪-೧೧೨
ಮೈಸೂರು

ಮೈಸೂರು ಸೀತಾರಾಮಶಾಸ್ತ್ರೀ

*

ಶ್ರೀರಸ್ತು.

# ಇಂದ್ರಕೀಲವಿಜಯನಾಟಕಂ.

## ಪ್ರಥಮಾಂಕಂ.

॥ ನಾಂದಿ ॥

ವೃತ್ತಂ ॥ ಶ್ರೀಮದ್ಗಂಗಾಪ್ರವಾಹಂ ತುಹಿನಕಿರಣನುಂ ಮೌಳಿಯೊಳ್ ಭೂಷಣಂಬೊಲ್ । ಧಾಮಂಗೊಂಡೊಪ್ಪೆ ತನ್ನೊಳ್ ಚಣದೆ ಮಣಿದರುತ್ತಾಪಮಂ ತೂಳ್ವುದೊಂದು ॥ ದ್ಧಾಮಂ ನೈಪುಣ್ಯಪುಂಜಂ ಚಿರಮನೆಸೆವಿನಂ ಬೋಧಿಪಂ ಪಾರ್ವತೀಶು। ಪ್ರೇಮಂ ವಿಶ್ವಾಭಿರಾಮಂ ವಿತರಿಕೆ ವಿಜಯಾನಂದಮಂ ಪೂರ್ಣಕಾಮಂ ॥ ೧ ॥

ಕಂ ॥ ಪಾವನಮಪ್ಪರಿವಿನ ಪೆಂ ।
ಪಾವನ ಪರಕೃಪೆಯಿನಪ್ಪುದೋ ಭಕ್ತಕುಲಃ ॥
ಪಾವನಸಿಂತಂ ಪರಮುಕೃ ।
ಪಾವನನಿಧಿಯಪ್ಪ ಮಹೇಶ್ವರಂ ಪೊರೆಗೆಮ್ಮಂ ॥ ೨ ॥

ಸೂತ್ರಧಾರಂ.-(ಪ್ರೇಕ್ಷ್ಯ ಸುತ್ತಲುಂ ನಿಟ್ಟಿಸಿ) ಆಃ !! ಸುತ್ತಲುಂ ಇಡುಕಿರಿದು ನೆರೆದಿರ್ಪ ರಸಿಕಮಹಾಶಯರ್ ಬಿಜ್ಜಗಳಿಂದೆ ಈ ರಂಗಮಂಟಪದ ಮುಂದಾಣಂ ಇಂದು ಅದೊಂದಪೂರ್ವಮಪ್ಪ ಸೊಬಗಂ ಬಳಕೊಂಡು ಅಂಭೋಧಿಯಂತೆ ವಿಜೃಂಭಿಸಿ ಗಂಭೀರವಾಗಿರ್ದಪ್ಪುದು.

---

☞ ಪದ್ಯಗಳಲ್ಲಿರುವ ಒಂದೊಂದು ಕ್ಲಿಷ್ಟಪದಕ್ಕೆ ಆಯಾಪುಟದ ಕೆಳಗೆ ಆ ಪದ್ಯದ ಸಂಖ್ಯೆಯೊಡನೆ ಅರ್ಥವು ಸೂಚಿಸಲ್ಪಟ್ಟಿದೆ ವಚನಗಳಲ್ಲಿರುವ ಕ್ಲಿಷ್ಟಪದಕ್ಕೆ ಪಕ್ಕಗಳಲ್ಲಿ $ $ ಈ ಗುರುತನ್ನು ಮಾಡಿ ಅಂತಹ ಪದಕ್ಕೂ ಅರ್ಥವು ಕೆಳಗೆ ಸೂಚಿಸಲ್ಪಟ್ಟಿರುವುದು.

☞ ಪದ್ಯಗಳಲ್ಲಿ * ಈ ಗುರುತುಳ್ಳ ಪದಗಳನ್ನು ಒತ್ತದೆ ಉಚ್ಚರಿಸಬೇಕು.

ಎಲೆ ಆರ್ಯಮಿಶ್ರರಿರ !

ಕಂ ॥ ಮಚ್ಚರವಿಲ್ಲದೆ ಜೆಚ್ಚರ ।
ಮಚ್ಚರಿಯೆನೆ ಬಿಚ್ಚಳಿಸುತೆ ಗುಣನಿನಿತಿರೆಯುಂ ॥
ಮೆಚ್ಚುತೆ ಕಚ್ಚಳಿದುಡಿಸುವ ।
ಸಚ್ಚರಿತರ ನಿಮಗೆ ನಮಿಪೆನೊಚ್ಚತಮಾಗಳ್ ॥ ೩ ॥

(ಆಗಸದೊಳ್ ಕಿವಿಗೊಟ್ಟು) ಏವೇಳ್ದಪಿರ್ ?

ವೃ ॥ ಎಸೆದಿರೆ ಲಕ್ಷಣಂಗಳಖಿಳಂ ಪೊದಳ್ದಿಪ್ಪಿರೆ ಸಂವಿಧಾನ ಮುಂ । ರಸಿಕರ ಚಿತ್ತಮಂ ಬಿಡದೆ ಸೂರೆಗೊಳುತ್ತಿರೆ ಸತ್ಕಥಾರಸಂ ॥ ಪೊಸತಿದು ನೋಡೆ ಕನ್ನಡದೊಳಂತಹುದಿಲ್ಲೆನೆ ಪೆಂಪುವೆತ್ತುದಂ । ರಸವೊಸರ್ವಂತೆ ನೀನಭಿನಯಿಪ್ಪುದು ನಾಟಕಮಂ ನಟಾಧಿಪಾ ॥ ೪ ॥

ಎಂದೋ ? (ಸ್ವಗತಂ) ಅಹಹ ! ಇದೇನಚ್ಚರಿ ? ಅಂತಪ್ಪನಾಟ ಕಮನೆ ಇಂದು ನಾವಭಿನಯಿಸವೇಳ್ಪುದೆಂದು ಬಗೆದಿರ್ದೆವು. ಆರ್ಯ ಮಿಶ್ರರ್ ಎಮ್ಮಯೆ ಬಗೆಯಂತೆ ಆದೇಶಿಸಿದರ್. (ಆಳೋಚಿಸಿ) ಮೇಣ್ ಅಚ್ಚರಿಯೇಂ ? ಸೂಕ್ತಿಯದೊಂದು ಸುಪ್ರಸಿದ್ಧಮಾಗಿರ್ಪುದುಗಡಾ !

ಕಂ ॥ ಪೊದರೊಳಡಂಗಿರೆ ಗರಿವೂ ।
ವದನಿರದಲರ್ವಕ್ಕಿಯುರಿವವೊಲ್ ಸರುಗೆಂಪಿಂ ॥
ವದನಂಗಾಣ್ಬುದರಿನೆ ಕೋ ।
ವಿದರರಿಗುಂ ಪೆರರ ಬಗೆಯೊಳಡಸಿದ ಬಗೆಯಂ ॥ ೫ ॥

(ಎಂದು ಸವಿನಯಂ) ಸಭಾಸದರ ಕಟ್ಟಾಣತಿಯಂ ಸಿರದೊಳಾಂತೆಂ. (ತೆರೆಯತ್ತಲಾಲೋಕಿಸಿ) ಆರ್ಯೆ ! ಇತ್ತಲೆಯಾತ್ತರ (ಎಂದಿನಿಸು ಉಸಿಕನಿರ್ದ್ದು)

---

೩. ಜೆಚ್ಚರಂ—ಜಗನೆ ಬಿಚ್ಚಳಿಸುತೆ—ವಿಸ್ತರಿಸುತ್ತ. ಕಚ್ಚಳಿ—ಬಿರುದಿನ ಬಳೆ. ಒಚ್ಚತಂ—ಚೆನ್ನಾಗಿ.

೫ ಗರಿವೂ—ತಾಳೆಹೂವು. ಅಲರ್ವಕ್ಕಿ—ತುಂಬಿ

ಇಂದೆಮ್ಮ ಭಾಗ್ಯವಿಶೇಷದಿಂದೆ $ ಇನ್ನರ್ $ ಸುಗುಣಸಂಪನ್ನರ್ ಸಭಾಸದಮಹಾಶಯರ್ ಎಮ್ಮ ಅಭಿನವನಾಟಕಾಭಿನಯಮಂ ಅವಲೋಕಿಸಲ್ ಪಿರಿದುಂ ತವಕಂಬಡುತಿರ್ದಪರ್. ಆದೊಡಂ ಮಂಗಳಗೀತಮನಾರಂಭಿಸಲ್ ಆಕೆಯುದೇಕೆ ಇನ್ನುಂ ಬರಳೆನ್ನಿಯುಳ್ ಮದನಪತಾಕೆ? (ನಟ್ಟನೆ ನಿಟ್ಟಿಸಿ) ಆಃ ಇನ್ನುಂ ರುಚಿರಮಪ್ಪ ಅಳಂಕಾರರಚನೆಯೊಳ್ ಇರ್ದಪಳ್. ಉತ್ಸವದ ವೇಳೆಗಳೊಳ್ ಇಂತು $ ತಳ್ವುದು $ ನೆಲದೊಳೆಲ್ಲಿಯುಂ ಪೆಣ್ಗಳ್ಗೆ ಸಾಜಂ. ಅಂತಲ್ತೆ -

ಕಂ॥ ಮೊಳಗಿರೆ ಪರೆ ನೆರೆದಿರೆ ಸಭೆ।
ಬೆಳಗಿರೆಯೊರತಿ ಪುರೋಹಿತಂ ಭೋಂಕನೆ ಮಂ॥
ಗಳಪೀಠಕೆ ಬಾರೆನುತಿರೆ।
ವಿಳಾಸದಿಂ ತರಳೆ ಕುರುಳ ತಿರ್ದುತು ಮಿರ್ಪ್ಪಳ್॥೬॥

ಇಂತಪ್ಪ ಪೆಮ್ಮೆಯ ಕೋವಿದರ್ ಸಭಾಸದರ್ ನೆರೆದು ನಾಟಕಾರಂಭಮಂ ನಿರುಕಿಸುತಿರೆ ಇನ್ನುಂ ತಳ್ವುದೆಂತು? (ಎಂದು ಮತ್ತೆ ತೆರೆಮುತ್ತಲ್) ಆರ್ಯೆ ! ಇನ್ನುಂ ನಿನ್ನ ಅಳಂಕಾರರಚನೆ ನೇರ್ಪಟ್ಟಿತಿಲ್ಲಮೋ ? ಬಾರ ಬಾರ.

ನಟಿ.–(ತವಕದಿಂ ಪೊಕ್ಕು) ಆರ್ಯ ! ಅದೇಂ ತಿಳಕಮುಂ ತಿರ್ದಿಕೊಂಡು ಬರ್ಪನಿತರೊಳ್ ಬಾರ ಬಾರ–ಎಂದು ತ್ವರೆಗೊಳಿಸಿದಪೈ?

ಸೂತ್ರಧಾರಂ.– ಆರ್ಯೆ ! ನಿನ್ನ ತಿಳಕಪಿರ್ಕೆ. ಇತ್ತ ನೋಡ ನೆರೆದಿರ್ಪ ವಿದ್ವದ್ರಸಿಕತಿಳಕರಂ. ಇವರ ಆಣತಿಯುಂ ನೀಂ ಆಲಿಸಿದುದಿಲ್ಲಮೋ ?

ನಟಿ.–ಇಲ್ಲಂ. ಅದೇನದೇಂ ?? ಎನ್ನ ತಳ್ವುದುದಂ ಮನ್ನಿಸಿ ನೀಂ ದಯದೆ ಬೆಸಸು.

ಸೂತ್ರಧಾರಂ.–

ವೃ॥ ಎಸೆದಿರೆ ಲಕ್ಷಣಂಗಳಖಿಳಂ ಪ್ರೌಢ*ಳೊಪ್ಪಿರೆ ಸಂವಿಧಾನಮುಂ।
ರಸಿಕರ ಚಿತ್ತಮಂ ಬಿಡದೆ ಸೂರೆಗೊಳುತ್ತಿರೆ ಸತ್ಕಥಾರಸಂ॥

ಇನ್ನರ್–ಇಂತಹ. ತಳ್ವುದು–ವಿಲಂಬಮಾಡುವುದು.

ಪೊಸತಿದು ನೋಡೆ ಕನ್ನಡದೊಳಂತಹುದಿಲ್ಲನೆ ಪೆಂಪುವೆತ್ತುದಂ ‖
ರಸವೊಸರ್*ವಂತೆ ನೀನಭಿನಯಿಪ್ಪುದು ನಾಟಕಮಂ ನಟಾಧಿಪಾ ‖

ಎಂದು.

ನಟ.—ಆರ್ಯನೆ, ಇದೆಮಗೆ ಪರಿತೋಷಾವಹಮೆ. ಆದೊಡೆ ಕನ್ನಡದೊಳ್ ಅಂತಹ ನಾಟಕಮಂ ಅದಾವ ಕಬ್ಬಿಗಂ ರಚಿಸಿರ್ದಪಂ?

ಸೂತ್ರಧಾರಂ.—ಆರ್ಯ! ಅದೇಕೆ ಚಿಂತಿಪೆ? ನೀನರಿಯಾ? ಆಲಿಸು.

ವೃ॥ ಖ್ಯಾತಶ್ರೀಹರಿತಾನ್ವಯಾಬ್ಧಿಶಶಭೃದ್ಗಂಡಾವಧಾನಿಪ್ರಧೀ।
ಜಾತಂ ರಾಮಕವೀಂದ್ರಸೇವನಲಸತ್ಸಾಹಿತ್ಯಧೀಕೌಶಲಂ॥
ಪ್ರೀತಶ್ರೀನೃಹರಿಪ್ರದತ್ತಕವಿತಾಸಾಮ್ರಾಜ್ಯಲಕ್ಷ್ಮೀಪದಂ॥
ಸೀತಾರಾಮಸಮಾಹ್ವಯಂ ಕವಿವರಂ ರಾರಾಜಿಸುತ್ತಿರ್ದಪಂ ॥೭॥

ಆತಂ ರಚಿಸಿದ ವಿಚಿತ್ರಸಂವಿಧಾನಮಂ ಬಳಕೊಂಡ ಸಲಕ್ಷಣಮಪ್ಪ ಇಂದ್ರಕೀಲವಿಜಯಮೆಂಬ ಆ ಅಭಿನವನಾಟಕಮನೆ ಅಭಿನಯಿಸಿ ಹೃದ್ಯಾನವದ್ಯವಿದ್ಯಾಲಂಕೃತರಂ ಈಪಾರಿಷದರಂ ಅದೆಂತಾನುಂ ಆಂ ಅಭಿನಂದನಂಗೊಳಿಸುವಂ.

ನಟ—ಆರ್ಯ, ಆ ಕವಿ ರಚಿಸಿದ ರೂಪಕಂ ಈ ಬಿಜ್ಜೆವಳ್ಳರಂ ಒಲಿಸಲ್ ಸಾಲ್ಗುಮೆ? ಏಕನೆ, ಕೆಲರ್—

ವೃ॥ ಚೆಂದದ ಶೈಲಿಯಂ ಗಿರದೆ ತಾರದೆ ಚೆಲ್ವಿನ ಸಂವಿಧಾನಮಂ।
ಚಂದದ ತಣ್ಗದಿರ್ಗಳನೆ ಪೋಲ್ವ ಪದಂಗಳನಯ್ಯೊ ತನ್ನ ಸ।
ಚ್ಛಂದದ ಜಾಣ್ಮೆಯಿಂ ಕಿಡಿಸಿ ಯೋಜಿಸಿ ಬಂಧಮನಂತುಮಿಂತು ತಾಂ
ಚಂದದ ಘಾಟಿಯೊಳ್ ಸಮದು ಲೋಗರ ಚಿತ್ತಮನಾಳ್ಗೊಂಡಪರ್॥೮॥

ಅದರಿಂ ಈ ರೂಪಕಂಗಳ್ ಈ ರಸಿಕಸಭಾಸದರ್ಗೆ ಸಂತಸಮಂ ಎಂತು ಅಮರ್ಚುಗುಂ?

---

೭. ಪರೆ—ಪಾದ್ಯ. ೮. ಗಿರದೆ—ಶೋಭಿಸಿದೆ, ಚಂದದ—ಚಂದ್ರನ, ಸಚ್ಛಂದದ [illegible] ಗ—ಬೆಂದಸಿನ. ಆಳ್ಗೊಂಡಪರ್—ವಶಮಾಡುವರು.

ಸೂತ್ರಧಾರಂ—ಆರ್ಯ, ನೀನುಸಿರ್ದುದು ಸಾಜಂ. ಜಗದೊಳ್ ಇಂತಪ್ಪ ಕಬ್ಬಿಗರೆ ಸಾಸಿರ್ವರ್. ಇಂತಪ್ಪರೇ ಪಿರಿದುಂ ಬಹುಮಾನ್ಯರ್. ಇವಂದಿರ್ ಬೆರೆತು ಬಿಗ್ಗನೆ ಬೀಗುತ್ತುಂ $ಕಿಳ್ಬಗೆಯೆಂಬ$ ಬಿಸದಿಂ ಸುಕವಿಗಳ $ದಾಂಗುಡಿಯ$ ಸುರುಚಿರಯಶೋವಲ್ಲರಿಯುಂ ಕಿಡಿಸಲಾರ್ಪರ್. ಇಂತಪ್ಪರ ಮಾತೇಕೆ ? ತಗೆ ; ಕೇಳ.

ಕಂ ॥ ತುಂಬಿದ ಬೆಳ್ದಿಂಗಳ ವೊಲ್ ।
ತಂಬೆಲರ್ವೋಲ್* ಬೀಣೆಯಿಂಚರಂಬೋಲ್ ಪೊನ್ನೋಲ್ ॥
ಚೆಂಬವಳದ ಕುಡಿವೋಲ್ ಬುಧ ।
ರಂ ಬಗೆಗೊಳಿಸುವುದು ಸೂಕ್ತಿ ತತ್ಕವಿವರನಾ ॥ ೮ ॥

ನಟ—ಆರ್ಯನೆ ! ಸಕ್ಕದಮಂ ಅರಿತ ಆಕವಿ ಕನ್ನಡದ ರೂಪಕಮಂ ಎಂತು ರಚಿಸಲ್ ನೆರೆದಂ ?

ಸೂತ್ರಧಾರಂ—ಆರ್ಯ! ನೀಂ ಇಂತು ಬೆಸಗೊಳ್ವುದು ತಗುಗುಂ. ಆಲಿಸ.

ಕಂ ॥ ಬಂದಿರೆ ಗುರುಕೃಪೆ ಮುಂಪಸೆ ।
ನಿಜಂ ಸಕ್ಕದದ ಕವಿತೆವೆಣ್ಣುಂ ತಾನೇ ॥
ಬಂದುಗಡಾ ಕೈವಿಡಿದಳ್ ।
ಚೆಂದದೆ ಕರ್ಣಾಟಸುಕವಿತಾಂಗನೆ ಬಳಿಕಂ ॥ ೯ ॥

ಸಕ್ಕದಗನ್ನಡಂಗಳೊಳ್ ಆಕವಿ ವಿರಚಿಸಿರ್ಪ ಪ್ರಬಂಧಂಗಳೆನಿತೊ ಬಳವು. ಆದರಿಂ ಶ್ರೀಮನ್ಮಹೀಶೂರಪುರವರಾಧೀಶನಪ್ಪ ಶ್ರೀಕೃಷ್ಣರಾಜೇಂದ್ರಸಾರ್ವಭೌಮನ ಆಸ್ಥಾನದೊಳ್ ಆತಂ ಉಭಯ

---

ಕಿಳ್ಬಗೆ—ಅಲ್ಪವಾದ ಅಭಿಪ್ರಾಯ. ದಾಂಗುಡಿಯ—ಹಬ್ಬುವ.
೮. ತಂಬೆಲರ್ವೋಲ್—ತಂಪಾದ ಗಾಳಿಯಂತೆ. ೯. ಸಕ್ಕದದ—ಸಂಸ್ಕೃತದ.

ಕವಿತಾಭಿಜ್ಞನೆಂದು ದೊರೆವಡೆದಿರ್ಪ್ಪಂ. ಆದೊಡಂ ಆಕವಿ ಆತ್ಮಶ್ಲಾಘನೆ ತನಗೆ ತಗದೆಂದು ಇಂತು ಬಿನ್ನವಿಸಿಕೊಳ್ವಂ. ಎಂತೆನೆ—

ಕಂ || ವತ್ಸಳಪಿತೃಗಳನೆಳೆಯನ |
ಕುತ್ಸಿತವಚಮುತ್ಸವಂಗೊಳಿಪ್ಪವೊಲಿದುವುಂ ||
ಮತ್ಸರಸೇತರಕೃತಿ ನಿ |
ರ್ಮತ್ಸರರೆಂದೆನಿಪ ಬುಧರನುತ್ಸಾಹಿಸದೇಂ || ೧೦ ||

ಮತ್ತಂ

ಕಂ || ಪಲಸಿನ ಮುಳ್ಗವಸಣಿಗೆಯು |
ಸಲೆ ಕಳದೊಳದೊಳಯನೊಲ್ದುಕೊಳ್ವವೊಲಿದರೊಳ್ ||
ನೆಲಸಿದ ದೋಷಂಗಳನುಳಿ |
ದಲಸದೆ ಗುಣಮಂ ಗ್ರಹಿಕ್ಕೆ ಬಿತ್ತಗರೊಲವಿಂ || ೧೧ ||

ಎಂದು. ಅದರಿಂ ಈಸಹೃದಯವಿದ್ವತ್ಸಾಮಾಜಿಕರಂ ಆತನ ರೂಪಕದಿಂ ಸಂತಸಂಗೊಳಿಪುದು ಎಮಗೆ ಅರಿದಲ್ತು. ಈವಿಷಯದೊಳ್ ನೀಂ ಇನಿತುಂ ಸಂದೆಗಂಬಡದಿರ. ದೈವಾನುಗ್ರಹದಿಂ ಈಗಳ್ ಎಮ್ಮ ನಾಟಕಾಭಿನಯಕಳಾಕೌಶಲ್ಯಮಂತೋರಲ್ ಈಕಾಲಂ ಅನುಕೂಲಂ. (ಎಂದು ಸುತ್ತಲೀಕ್ಷಿಸಿ) ಅಂತಲ್ತೆ —

ವೃ || ಪೊಸತಾನಾಟಕಮುಂ ರಸಜ್ಞಬುಧರೀ ಸಭ್ಯರ್ಕಳುಂ ನೋಡೆ ತಾ | ನೆಸೆಗುಂ ಪೊಳ್ತದುವುಂ ಬಸಂತಸಿರಿಯಿಂದುಲ್ಲಾಸಮಂ ಬೀಗುತುಂ || ರಸಭಾವಜ್ಞರಿವರ್ ಕುಶೀಲವವರರ್ ವಾದ್ಯಂಗಳಂ ಬಾಜಿಪರ್ | ಜಸಮೊಂದಿರ್ಪ್ಪುವು ನಾಟಕಾಭಿನಯದೊಳ್ ನಾವೆಲ್ಲರುಂ ಕೇಳ್ವುದೇಂ || ೧೨ ||

ಅದಂತಿರ್ಕ್ಕೆ; ಮೊದಲ್ ಈ ಸಭ್ಯರ್ಗೆ ಕರ್ಣಾನಂದಮಪ್ಪವೊಲ್ ಈ ವಾಸಂತವಾಸರಂಗಳಂ ಅಧಿಕರಿಸಿ ಪಾಡ. ಈಗಳಲ್ತೆ —

೧೧. ಗವಸಣಿಗೆಯು—ಮುಸುಕನ್ನು. ಬಿತ್ತಗರ್—ಚಿತ್ರಕರು.

ವೃ ॥ ಸ್ಮರರಾಜಂ ಬರೆ ಚೈತ್ರಯಾತ್ರೆಗೆ ಪಿಕಂ ಪುಂ ಸೂಚಿಕುಂ ತಾಂ ತಳಾ । ರರವೋಲೆಂದೆನೆ ಬಗ್ಗಿಕುಂ ಕೆಳೆಯನಂ ನೋಡಲ್ ಸುಗಂಧಾಳಿ ತೀ ॥ ವಿರೆ ತೆಂಗಾಳಿ ವಿಳಾಸದಿಂದೆ ಸುಳಿಗುಂ ಚೈತ್ರಂ ಮಹಾಮಾತ್ಯನೊ । ಲ್ದರಸಂಗಿಂದುಪಹಾರವೀವನೆನೆ ಕಾಣ್ಗುಂ ಪಣ್ದಳಿವರ್ಗಗಳಂ ॥ ೧೩ ॥

ನಟಿ— ಅಂತು (ಎಂದು ಪಾಡುವಳ್)

ಕಂ ॥ ಅರಲ್ಗೈಸರಲನ ಸರಲೆಂ ।
ದೊರೆವುದು ಬರಿದಲ್ತು ಬಗೆಯನುಚ್ಚುಗುಮೆನುತುಂ ॥
ಬಿರಹಿಗೆ ಸಾರುಗುಮೆನೆ ಯೆಂ ।
ಮೊರೆದಪ್ಪುವೋ ಪರಮೆವರಿಗಳೀ ಗೆಸೆದೆಸೆಯೊಳ್ ॥ ೧೪ ॥

ಸೂತ್ರಧಾರಂ—ಕಳಕಂಠಿ! ನಿನ್ನ ಗಾನದತ್ತಣಿಂ ಸಭಾಸದರಿವರ್ ಅತ್ಯಾನಂದಪರವಶರಾದರ್. ಈಗಳ್ ಅದಾವನಾಟಕಮಂ ಅಭಿನಯಿಪುದು.

ನಟಿ— ಆರ್ಯ! ಇದೇಂ ಇಂತು ಬೆಸಗೊಂಡಪ್ಪೈ? "ಇಂದ್ರಕೀಲವಿಜಯಮಂ ಅಭಿನಯಿಸವೇಳ್ಪುದು" ಎಂದು ನೀಂ ಮೊದಲೆ ನಿರವಿಸಿದ್ದೈಗಡ?

ಸೂತ್ರಧಾರಂ.—(ನೆನೆವುಗೊಂಡು) ಆಃ! ಇಸಿದಿಸಿದಪ್ಪ ನಿನ್ನ $ ಆಣತಿಯ $ ಸೊಬಗಿಂ ಆಂ $ ತಿಟ್ಟವಿಟ್ಟ ಪಾವೆಯಂತೆ $ ಮರವಟ್ಟು ಈಗಳುಸಿರ್ದುದಂ ಈಗಳೆ ಮರೆತೆಂ ಗಡ.

ನಟಿ—($ ಬಾಗುಳಮಂ $ ಅಭಿನಯಿಪಳ್)

ಸೂತ್ರಧಾರಂ.—(ನಟಿಯಂ ಆಲೋಕಿಸಿ) ಆರ್ಯೆ! ಈಗಳ್ ಅದೇಂ ನೀಂ $ ಪೌವನೆ $ ಬಾಗುಳಮಂ ಅಡರ್ದಂತೆ ಕಾಣ್ಬೆ?

---

೧೩ ಬಗ್ಗಿಕುಂ–ಕೂಗುವುದು. ೧೪. ಐಸರಲನ–ಮನ್ಮಥನ ಉಚ್ಚುಗಂ–ಭೇದಿಸುವುದು. ಪರಮೆವರಿಗಳು–ಮರಿದುಂಬಿಗಳು

$ ಆಣತಿಯ–ಗಾನದ ತಿಟ್ಟವಿಟ್ಟಪಾವೆಯಂತೆ–ಚಿತ್ರಿಸಿದ ಬೊಂಬೆಯಂತಾಗಿ ಬಾಗುಳಮಂ–ವ್ಯಾಕುಲತೆಯನ್ನು ಪೌವನೆ–ಆಕಸ್ಮಿಕವಾಗಿ

ನಟ.- ಆರ್ಯನೆ ! ಈಗಳ್ ಆನಾಟಕಕಥಾಸಂದರ್ಭಮಂ ಪರಿಶೀಲಿಸುತಿರ್ಪಿನಂ, ಯುಧಿಷ್ಠಿರಂಗೆ ಬದವಿದ ದ್ಯೂತಮೂಲಕಮಾದ ವನವಾಸಂ ನೆನೆಪಿಂಗೆ ಬಂದುದು. ಇದರಿಂ ಎನ್ನ ಮನಂ ಅತ್ಯಾಕುಲಮಾಗಿ ಇರ್ದಪುದು.

ಸೂತ್ರಧಾರಂ -ಮಹನೀಯರ್ಗೆ ಬದವಿದ ಕಷ್ಟಮಂ ಬಗೆದು ಬಾಗುಳಂಗೊಳ್ವುದು ಕುಲೀನೆಯರ ನಿನ್ನನ್ನರ್ಗೆ ಸಾಜಂ.

ನಟ -ಆರ್ಯನೆ ! ಅಂತೆ ಅಲ್ತು. ಎಮ್ಮ ಆರ್ಯಮಾತುಳಂ ಸುವೃತ್ತನಾದೊಡಂ ವಿಧಿಯೋಗದಿಂ ದುರೀಹನೊಡನೆ ಜೂಜಾಡಿ ಸರ್ವಸ್ವಮಂ ಸೋಲ್ತು ದೇಶಭ್ರಷ್ಟನಾಗಿರ್ದಪನಲ್ತೆ ? ಆತಂಗೆ ಆದೆಂದಿಂಗೆ ಪದುಳಂ ಅಪ್ಪುದೆಂದು ಚಿಂತಿಸಿದಪೆಂ.

ಸೂತ್ರಧಾರಂ.-ಇದಕ್ಕೇಕೆ ಚಿಂತಿಪುದು ?

ವೃ ॥ ಪರಿಪರಿಯಲ್ಲಿ ದುರ್ವಿಧಿಯ ಯೋಗದೆ ಪೇರೆಡರ್ಗಳ್* ಮುಸುಂಕೆಯುಂ । ಪಿರಿಯರ ನಲ್ಕೆ ತನ್ನೊಳಿರೆ ಕೇಳ್ ತರದಿಂ ಸೊಗಮಾಂಪನೊಳ್ಪದಂ ॥ ಸಿರಿಯನದೆಲ್ಲಮಂ ಪಗೆಗೆ ಸೋಲ್ತು ಬನಂಬುಗುವೀ ಯುಧಿಷ್ಠಿರಂ । ಹರನ ಕಟಾಕ್ಷದಿಂದೆ ವಿಜಯಾಭ್ಯುದಯಾರ್ಥಮನಾಂಪ ಪಾಂಗಿನಿಂ ॥ ೧೫ ॥

ಅದರಿಂ ಮುಂದಣ ಕಜ್ಜಮಂ ಅನುಗೊಳಸಲ್ ಪೋಪಂ.

(ಎಂದಿರ್ವರುಂ ತೆರಳ್ದರ್)

॥ ಇಂತಿದು ಪ್ರಸ್ತಾವನೆ ॥

---

(ಬಳಿಕಯುಧಿಷ್ಠಿರಂದ್ರೌಪದಿ,ಭೀಮಾರ್ಜುನನಕುಲಸಹದೇವಧೌಮ್ಯರೊಡನೆ ಪೊಗುವಂ)

ಯುಧಿಷ್ಠಿರಂ.-(ಧೌಮ್ಯನಂ ನೋಡಿ) ಪೂಜ್ಯರೆ ! ಎಮಗೆ ಇಂತಪ್ಪ ದುಗುಡಂ ಬರಲ್ ತಕ್ಕುದೇ ?

---

೧೫. ಪೇರೆಡರ್ಗಳ್-ಮಹಾಕಷ್ಟಗಳು.

ವೃ॥ ಮಿಗೆ ಜನ್ಮಾಂತರದಲ್ಲಿ ನಾನಿರದದೇಂ ಮಹಾಪಾಪಮಂ
ಗೆಯ್ದೆನೋ। ಜಗದೊಳ್ ನೇರಿದರಂ ತೃಣಕ್ಕೆ ಬಗೆದೇಂ ಬಿಂಕಂಬಡು
ತ್ತಿರ್ದೆನೋ॥ ಸೊಗದಿಂದಂ ಬರ್ದು*ಕೀಗಳೆಂತು ಬನದೊಳ್ ಬೇರ್ಪಿ
ಕ್ಕೆಯುಂ ತಿಪ್ಪೆವೋ। ನಗುವಂತಾಯ್ತು ಗಡಾ ಜಗತ್ತ್ರಯದೊಳಂ
ವಿಖ್ಯಾತನಾದೆನ್ನ ಬಾಳ್ ॥೧೬॥

ಧೌಮ್ಯಂ.—ಮಹಾರಾಜನೆ! ಏತಕ್ಕೆ ಇಂತು ಚಿಂತಿಪ್ಪೈ? ಸೈರಿಸು, ಸೈರಿಸು.

ಕಂ॥ ಸೊಗಯಿಪ ವಿಜಯಶ್ರೀ ಬಗೆ।
ಮಿಗೆ ಪರಮೇಶ್ವರನನುಗ್ರಹಂ ನಿಮಗಕ್ಕುಂ॥
ಜಗತಿಯೊಳಾರ್ಯಗ್ಗೊರ್ದವಿದ।
ಮುಗುಡಂ ಚಿರಕಾಲಮಿರದು ಕೇಳ್ ನೃಪಕುಲತಿಲಕಾ ॥೧೭॥

ಯುಧಿಷ್ಠಿರಂ.—ಹಗೆವರ $ ಏಳದದಿಂ $ ಬೇಗುದಿಗುದಿಯುತಿರ್ಪ ಅಸಹಾಯರೆಮಗೆ ವಿಜಯಶ್ರೀ ಸಮನಿಪ್ಪುದು ಎಂತು?

ಧೌಮ್ಯಂ.—ಮಹಾರಾಜನೆ! ಪರಮದಯಾನಿಧಿಯಾದ ಪರಮೇಶ್ವರನ ಅನುಗ್ರಹದಿಂ ವಿಜಯೋಲ್ಲಾಸಕರಮೆನಿಪ ದಿವ್ಯಾಸ್ತ್ರಸಾಹಾಯ್ಯಂ ನಿಮಗೆ ತಪ್ಪದೆ ಅಪ್ಪುದು.

ಯುಧಿಷ್ಠಿರಂ.—ಪೂಜ್ಯರೆ! ಅಂತಪ್ಪ ಪರಮೇಶ್ವರಾನುಗ್ರಹಮಂ ಬಡರಿಪ ಸಾಧನಸಂಪತ್ತಿ ಎಮಗೆ ಏಸಿಕ್ಕರ್ಕುಂ?

ಧೌಮ್ಯಂ.—ಮಹಾರಾಜನೆ! ಪರಮೇಶ್ವರನೊಳ್ ನಿನಗೆ ಸಹಜವಾಗಿರ್ಪ ಅನಿತರಸಾಧಾರಣಮಪ್ಪ ಸದ್ಭಕ್ತಿಸಂಪತ್ತಿಗಂ ಪೆರತಾವುದೊ ಸಾಧನಂ?

---

೧೬ ನೇರಿದರಂ—ಸಂತರನ್ನು. ಏಳದದಿಂ—ತಿರಸ್ಕಾರದಿಂದ

ಯುಧಿಷ್ಠಿರಂ.—ಪೂಜ್ಯರೆ! ಆಂ ಏನುಮಂ ಅರಿಯೆಂ. ಎಮಗೆ ಅನುಗ್ರಾಹಕರಾದ ನಿಮ್ಮ ನುಡಿಯುಂ ಪರಮಾರ್ಥಸಂಪತ್ತಿಗೆ ಬೀಜಮೆಂದು ಎಣಿಪೆಂ.

ಧೌಮ್ಯಂ—ಮಹಾರಾಜನೆ! ಅದಿರ್ಕ್ಕೆ. ಈಗಳ್ ಎತ್ತಾನುಂ ಬಂದೆಡೆ ನಿಲ್ವಂ.

ಯುಧಿಷ್ಠಿರಂ.—ಪೂಜ್ಯರೆ! ಆಂ ಅತಿದೂರಂ ಎಯ್ದಿದೊಡಂ ಅನುವಪ್ಪ ಎಡೆಯುದಾವುದುಂ ದೊರೆತುದಿಲ್ಲಂ. ಬೆಂಗದಿರನ ಬಿಸುಪಿಂದೆ ಬಂಬಲ್ಬಳಲ್ದೆವು.

ಧೌಮ್ಯಂ—ಮಹಾರಾಜನೆ! ಅದೆ ನೋಡು. ಅತ್ತಲೊಂದು ಪೆರ್ಮರಂ ಆ ತೋರುಗುಂ. ನಡೆ ಅದರ ಅಡಿಯ ಪಾಸರೆಯೊಳ್ ಕುಳ್ಳಿರ್ದು ಇಸಿತು ದಣಿವಂ ಕಳದುಕೊಳ್ವಂ.

ಯುಧಿಷ್ಠಿರಂ—ಅಂತು ಅಕ್ಕೆ, ಬನ್ನಿಂ. (ಎಂದೆಲ್ಲರೊಡನೆ ಸಾರ್ದು ಮರದ ತಳದೊಳ್ ಕುಳ್ಳಿರ್ದು) (ಮರನಂ ನೋಡಿ) ಪೂಜ್ಯರೆ! ಇಂದು ಎನ್ನಿಂದಮುಂ ಮರನಿದು ಧನ್ಯಮಲ್ತೆ? ನೋಡಿಂ—

ವೃ॥ ತಳಿಗುಂ ತಣ್ಣೆಳಲಂ ಮೃಗಂ ಚಿಗುರ್ಗಳಂ* ಮೆಲ್ಲುಂ
ಖಗಂ ಮೋೞ ಪೊಳ । ಲ್ಗಳೊಳ್ಕರ್ಕ್ಕರಂ ಪುಳು ಕೋಡಿನೊಳ್ ನಲವಿ
ನಿಂದೋಡಾಡುಗುಂ ಕೋಡಗಂ ॥ ಅಳಿ ಪೀರ್ಗುಂ ನರುವೂವಸೀಪರಿ
ಸಮಸ್ತಾಂಗಂಗಳಂ ಪ್ರಾಣಿಮಂ । ಡಳಿಗಾನಂದಮನೀವ ಪೆರ್ಮರ
ನಿದೇಂ ಸಂಶ್ಲಾಘ್ಯಮೋ ಲೋಕದೊಳ್ ॥ ೧೮ ॥

ಧೌಮ್ಯಂ.—ಎಲೆ ರಾಜಮಾರ್ತಾಂಡನೆ! ಮೂಜಗಕಂ ಉಪಕಾರಿಯೆನಿಪ ನಿಮ್ಮೊಳ್ $ ಏಗಳುಂ $ ಇರ್ಪ ಲೋಕೋತ್ತರಮಪ್ಪ ಪೆರ್ಮೆಯುಂ ನೀಂ ಎಂತು ಅರಿದಪ್ಪೈ? ಕತ್ತುರಿಮಿಗಂ ತನ್ನೊಳ್

---

ಬೆಂಗದಿರನ—ಸೂರ್ಯನ. ಪಾಸರೆಯೊಳ್—ಹಾಸುಗಲ್ಲಲ್ಲಿ.

೧೮. ಪೊಳಲ್ಗಳೊಳ್—ಪೊಟರೆಗಳಲ್ಲಿ. ನರುವೂವಂ—ಸುವಾಸನೆಯುಳ್ಳ ಹೂವನ್ನು, ಏಗಳುಂ—ಯಾವಾಗಲೂ

ರ್ಪ ನಱುಗಂಪಂ ಅಱಿದಪುದೆ? ನಱುವೂಗೆ ತನ್ನೊಳಗಿರ್ಪ ಸೌಕುಮಾರ್ಯಂ ತೋಱುಗುಮೋ? ಕಪ್ಪುರಂ ತನ್ನಲ್ಲಿ ದೊರೆಕೊಂಡಿರ್ಪ ತಣ್ಪಂ ಬಗೆಯಲಾರ್ಪುದೆ? ಮಲಯಮಾರುತಂ ತನತ್ತು ಶೈತ್ಯಸೌರಭ್ಯಮಾಂದ್ಯವಿಭವಮಂ ತಾಂ ತಿಳಿಯಬಲ್ಲುದೆ? $ ತೊಂಡುಗೆಡೆವ ಪುರುಳಿ $ ತನ್ನ ನಲ್ನುಡಿಯ ಸವಿಯಂ ಭಾವಿಸಬಲ್ಲುದೆ? $ ತಣ್ಗಲ್ $ ತನ್ನೊಳ್ ಬಸಱುತಿರ್ಪ $ ಇರ್ಪುಳಂ $ ಅಱಿಯಲಾರ್ಪುದೆ? ಜಗನಲ್ತೆ ತಾನಱಿದು ಸಂತಸಂಬಡುವುದು. ಪಲವಾತೇಕೆ? ಲೋಕಾನಂದಕರನೆನಿಪ ನೀಂ ತಳತಳನೆ ಮೂಡುವ ಪುಣ್ಣಮೆಚಂದಿರನಂತೆ ಸರ್ವರ್ಗಂ ಅಭಿನಂದನೀಯಂ.

ಯುಧಿಷ್ಠಿರಂ.--ಪೂಜ್ಯರೆ! ನೀಂ ಇಂತು ಅನುಗ್ರಾಹ್ಯನಾದ ಎನ್ನೊಳ್ ಪಕ್ಷಪಾತದಿಂ ನುಡಿವುದು ಸಾಜಮೆಗಡ?

ಧೌಮ್ಯಂ.--ಮಹಾರಾಜನೆ! ನಿನ್ನೊಳ್ ಪಕ್ಷಪಾತದಿಂ ಆಂ ಇಂತು ನುಡಿವನಲ್ತು. ನಿನ್ನ ಸುಗುಣಶ್ರೀಯೊಳ್ ಜಗಕೆಲ್ಲಂ ಪಕ್ಷಪಾತಮುಂಟು. ನೀಂ ಅಂತು ನೆತ್ತದಾಟದೊಳ್ ಪರಾಜಿತನಾಗಿ ಹಸ್ತಿನಾವತಿಯಂ ಉಳಿದು ಬರ್ಪಂದು ಪ್ರಜೆಗಳ್ಗೆ ಬದವಿದ ಮಗುಡಂ ವಾಗಗೋಚರಂ ಗಡ, ಕೇಳ್.

ವೃ॥ ರವಿಯನಗಲ್ದ ತಾವರೆಗಳಂತೆ ಸುಧಾಕರನಿಲ್ಲದಿರ್ಪ ಕೈ।
ರವತತಿಯಂತೆ ಕಾರ್ಮುಗಿಲ ಕಾಣದ ಸೋಗೆನವಿಲ್ಗಳಂತೆ ಧೇ॥
ನುವನುಳಿದಿರ್ಪ ವತ್ಸಕುಲದಂತಕಟಾ ಸಿರಿವೋದ ಲುಬ್ಧರಂ।
ತವನಿಪ ನಿನ್ನನಗಲುತಿರ್ಪವರೇಂ ಕಳಗೆಟ್ಟು ನಿಂದರೋ॥ ೧೯॥

ಇಂದು ನೂರ್ನುಡಿಗಳಿಂ ಏಂ? ಅಂತು ಪ್ರಜಾನುರಾಗಮಂ ಪಡೆದ ಸುಗುಣಾರ್ಣವಂ ನೀಂ ಧನ್ಯನಲ್ತೆ?

---

ತೊಂಡುಗೆಡೆವ ಪುರುಳಿ--ನುಡಿವ ಗಿಳಿ. ತಣ್ಗಲ್--ಚಂದ್ರಕಾಂತಶಿಲೆ. ಇರ್ಪುಳಂ--ಧ್ರುವವನ್ನು. ೧೯. ಸಿರಿವೋದ--ಸಂಪತ್ತನ್ನು ಕಳೆದುಕೊಂಡ.

ಯುಧಿಷ್ಠಿರಂ--ಪ್ರಜಾಪ್ರಸ್ತಾವದಿಂ ಈಗಳ್ ಎನ್ನ ಮನಂ ಅತ್ಯಾಕುಲಮಾಗಿರ್ದಪುದು. ಹಾ ಬಿಡಿಯೆ! ಎಮ್ಮನೆ ಅವಳಂಬಿಸಿಕೊಂಡು $ ಅಳ್ತಿಯಿಂ $ ಎಮ್ಮಂ ಸೇವಿಸುತ್ತಿರ್ದ ಪ್ರಜೆಗಳಂ ಪೊರೆಯಲಣ್ಮದೆ ಇತ್ತಲ್ ಬನ್ದಂತೆವೊಲ್ ಎನಗಿದ್ದೈ? ಇಂ ಅವಂದಿರ ಯೋಗಕ್ಷೇಮಮನಂ $ ಕಟ್ಟೆರಕದಿಂ $ ಆರಯ್ವರ್? ಪೆಸರ್ವೆತ್ತ ಆನುಂ ಇಂತು ರಾಜನೀತಿಗೆ ಸಲ್ಲದ ಕಜ್ಜಮುಮಂ ಮಾಳ್ಪುದಾದುದೇ?

ವೃ॥ ಪ್ರಜೆಗಳ ಪಾಲನಂ ಗಡ ಮಹೀಪತಿಗಾರಯೆ ಮುಖ್ಯಮುರ್ವಿಯೊಳ್। ಪ್ರಜೆಯೆನೆ ಮಕ್ಕಳೆಂದುಸಿರ್ವರರ್ಥಮನಾದುದರಿಂದದಾವಗಂ॥ ಪ್ರಜೆಗಳನೊಲ್ದು ಮಕ್ಕಳವೊಲೇ ಪರಿಪೋಷಿಸವೇಳ್ಕು ಮಕ್ಕಟಾ। ಪ್ರಜೆಗಳನೋವದಾ ವಿಧಿಹತಂಗೊಳವೇನಿಹಮುಂ ಪರತ್ರೆಯುಂ॥ ೭೦॥

ಭೀಮಂ --(ಆತ್ಮಗತಂ) ಎಮಗೆ ಆನೀಚಕೌರವರ್ ಬಡರ್ಚಿದ ಉಪಟಳಂ ಎತ್ತಲೋ. "ಮನೆಗೆ ಮಾರಿ, ಪೆರರ್ಗುಪಕಾರಿ." ಎಂಬಂತೆ $ ಬರಿದೆ $ ಪುರಜನಕ ಅಳ್ತಪಂ. ಈತನ ಪರಿಯಂ ಏವೇಳ್ವೆಂ? ರಾಜ್ಯಮನುಳಿದ ಎಮಗೆ ಪ್ರಜೆಗಳ ಪ್ರಸ್ತಾವಂ ಏಕೆ?

ಧೌಮ್ಯಂ.--ಮಹಾರಾಜಾ! ರಾಜ್ಯಕೋಶಾದಿಗಳಂ ಉಳಿದು $ ನೀಡುಂ $ ಕಷ್ಟಂಬಡುತಿರ್ಪ್ಪಗಳುಂ ನೀಂ ಇಂತು ಪ್ರಜಾವಿಷಯದೊಳ್ ದುಃಖಿಸುತಿರ್ಪ್ಪುದು ಧರ್ಮಾತ್ಮನಪ್ಪ ನಿನ್ನ ಧರ್ಮವಲ್ತೆ?

ಭೀಮಂ --(ಆತ್ಮಗತಂ) ಅಹಹ! ಅದೆಂತಪ್ಪ ಧರ್ಮವೊ? ಈತಂಗೆ ಸಾಲದೆಂದು ಈ ದೇಸಿಗರ ಉಪದೇಶಮುಂ ಬೇರೆ.

ಧೌಮ್ಯಂ.--ಆದೊಡೆ ನಿನ್ನಂ ಇಂತು ದುರ್ದಶೆಗೆ ಗುರಿಗೆಯ್ದ ಆದುರುಳರ್ ಭೋಂಕನೆ ಅಳಿವಂ ಎಯ್ದದೆ ಇರರ್. ಅದರಿಂ ನೀಂ ಚಿಂತಿಪುದಾಗದು.

---

ಅಳ್ತಿಯಿಂ--ಪ್ರೀತಿಯಿಂದ ಕಟ್ಟೆರಕದಿಂ--ಬಹುಪ್ರೀತಿಯಿಂದ. ೭೦. ಓವದ-ಪಾಲಿಸದ, ಇಹಮುಂ ಪರತ್ರೆಯುಂ--ಐಹಿಕಾಮುಷ್ಮಿಕಗಳು ಬರಿದೆ--ಸುಮ್ಮನೆ ನೀಡುಂ--ಬಹುವಾಗಿ.

ಭೀಮಂ.—(ಆತ್ಮಗತಂ) ದಲ್. ಚಿಂತಿಪ್ಪುದೇಕೆ? ಅಹಹ! ಪೆಣ್ಗಳಂತೆ $ ಪೆಳರುತೆ ಈ ಪಳುವಿನೊಳ್ $ ಅಳುತಿರ್ದೊಡೆ ಆದುರುಳರ್ ಭೋಂಕನೆ ಆಳಿವಂ ಎಯ್ದುಗುಂ.

(ತೆರೆಯಲ್ಲಿ ಕಲಕಲಂ)

ಯುಧಿಷ್ಠಿರಂ.— (ಕೇಳ್ದು) ಇದೇಂ ಇತ್ತಲ್ ಇಂತುಟು ಕಲಕಲಂ? (ನೋಡಿ) ಪಲಂಬರ್ ಮಾನಿಸರ್ ಇತ್ತಲ್ ನಡೆತರುತುಂ ಇರ್ದಪರ್. ಇವರಾರ್? ಎಮ್ಮ ಪ್ರಜೆಗಳಕ್ಕುಮೆ? (ನಾಡೆ ನೋಡಿ) ಆಃ! ಅದೇಕೆ ಸಂದೆಗಂ? ದೂರದೊಳ್ ಇವಂದಿರಂ ನೋಳ್ಪಾಗಳ್ ಎನ್ನ ಮನದೊಳ್ ಆದೊಂದು $ ನಣ್ಪು $ ಬದವಿಕ್ಕುಂ.

(ತರುವಾಯಿಂ ಪ್ರಜೆಗಳ್ ಪುಗುವರ್)

ಮೊದಲಿಗಂ.—

ಕಂ॥ ಸಂದಣಿಸಿದ ಕೌಂತೇಯರ।
ಸಂದರ್ಶನದಿಂದೆ ಧನ್ಯನೆಂದೆನಿಸದೊಡಾ॥
ಸುಂದರಿಯುಂ ನಂದನರುಂ।
ಮಂದಿರಮುಂ ಮಂದಭಾಗ್ಯನೆನಗೇಕಕಟಾ ॥೨೧॥

ಎರಡನೆಯವಂ —

ಕಂ॥ ನೀತಿಯುರೀತಿಯುಮನರಿಯದೆ।
ಪಾತಕಮಾರ್ಗದೊಳ್ ಚರಿಪ ಕೌರವನೀಚಂ॥
ಭೂತಲದೊಳಗಪಕೀರ್ತಿನಿ।
ಕೇತನವೆನಿಸುತ್ತದೇಕೆ ತಾಂ ಬ*ರ್ದುಕುವನೋ ॥೨೨॥

---

ಪೆಳರುತೆ-ಹೆದರುತ್ತ. ಪಳುವಿನೊಳ್-ಕಾಡಿನಲ್ಲಿಯೇ. ನಣ್ಪು-ಸಂತೋಷ.
೨೨. ನಿಕೇತನಂ-ಮನೆ.

ಮೂರನೆಯವಂ.–

ಕಂ|| ನೋಡಿದ ಚಣದೊಳ್ ಜಾಣಿಂ ।
ಬೇಡುವುದಂ ಬಗೆದು ನೀಡು ನೀಡುವ ರಾಜಂ ||
ಕಾಡಿಂಗೆ ಪೋಗೆ ನೀಡುಂ ।
ನೀಡುತೆ ನೀಡಾಗದೆಮ್ಮನಾರ್ ಪೊರೆದಪರೋ ||೨೩||

ನಾಲ್ಕನೆಯವಂ.–

ಕಂ|| ಚಂಡದುರಾತ್ಮರನೆಲ್ಲಂ ।
ದಂಡಿಸಲುಂ ತಾಂ ಮಹಾತ್ಮರಂ ಪಾಲಿಸಲುಂ ||
ಪಂಡಿತರೆನೆ ಬೆಸಗೊಂಡಾ* ।
ಪಾಂಡವರಿಂದೆತ್ತ ಮಂಡಿಸಿಪ್ಪರೊ ತಿಳಿಯೆಂ ||೨೪||

ಐದನೆಯವಂ

ಕಂ|| ಭ್ರಷ್ಟಸುಯೋಧನ ! ತೆಗೆ ತೆಗೆ ।
ದುಷ್ಟವಿದೆಂದೆನಿಪ ನಿನ್ನ ನಡೆವಳಿಯಿಂದಂ ||
ಶಿಷ್ಟರ್ ಪಾಂಡುಕುಮಾರರ್ ||
ಕೆಷ್ಟಕ್ಕೀಡಾಗಿ ಕಾಡನೆಯ್ದಿದರಲ್ತೇ || ೨೫ ||

ಒರ್ವಂ –ಮಹಾತ್ಮರ್ ಕೌಂತೇಯರ್ ಎತ್ತಲೆತ್ತಲ್ ಅರಸಿದೊಡಂ ಕಣ್ಗೆವಾರರ್. ಏಗೆಯ್ವುದು ? (ಸುತ್ತಲುಂ ನೋಡಿ)ಅಮಮ ! ಆಂ ಪುಣ್ಯಶಾಲಿಗಳಲ್ತೆ ? ಮಹನೀಯರಿತ್ತಲೆ ಇರ್ದಪರ್. (ಎಂದು ಸಮೀಪಕ್ಕೆ ಬಂದು) ಮಹಾನುಭಾವರಿರಾ ! ನಿಮಗೆ ವಂದಿಪೆವು.

ಯುಧಿಷ್ಠಿರಂ –ನಾಡಿಗರಿರಾ ! ಇತ್ತಲ್ ಐತಂದು $ಕುಳ್ಳಿರ್ವುದು.$ ಅಕಟ ! ನೀವೇತಕ್ಕೆ ಕಾಡಿಂಗೆ ಬಂದಿರ್ ?

---

೨೩. ಜಾಣಿಂ–ಜಾಣತನದಿಂದ, ನೀಡು, ನೀಡುಂ–ಅಧಿಕವಾಗಿ, ನೀಡಾಗದೆ–ವಿಲಂಬಿಸದೆ, ಕುಳ್ಳಿರ್ವುದು–ಕುಳಿತುಕೊಳ್ಳುವುದು.

ಭೀಮಂ.–(ಆತ್ಮಗತಂ) "ಅಡವಿಗೆ ಪೋದೊಡಂ ಚಿಗಟನ ಕಾಟಂ ತಪ್ಪದು" ಎಂಬಂತೆ ಇಲ್ಲಿಯುಂ ಪ್ರಜೆಗಳ ಕಾಟವೆ?

ಪ್ರಜೆಗಳ್.–ಮಹಾರಾಜನೆ! ಎಮ್ಮಂ ಅತ್ತಲೆ ತೊರೆದು ನೀಂ ಇತ್ತಲ್ ಬಂದಿರ್ಪುದು ಉಚಿತಮೋ? ನೀಂ ಅದೆತ್ತಲ್ ತೆರಳ್ದಪಿರ್ ಆಮುಂ ಅತ್ತಲ್ ಬರಲ್ಕೆ ಸಿದ್ಧರೆವು. ದುರುಳರ್ ದುರ್ಯೋಧನಾದಿಗಳ್ ಅಧರ್ಮದಿಂ ನೆತ್ತದ ಆಟದೊಳ್ ಗೆಲ್ದು ನಿಮ್ಮಂ ಅಡವಿಗೆ ಅಟ್ಟಿದರೆಂದು ಎಮ್ಮೆ*ರ್ದೆ ಅಡಿಗಡಿಗಂ ಮರುಗುತಿರ್ಕುಂ. ನಿಮ್ಮನೆ ಅವಲಂಬಿಸಿಕೊಂಡಿರ್ಪ ನಮ್ಮಂ ಪಾಪಿ ದುರ್ಯೋಧನನ ಕೈಯೊಳ್ ಈವುದು ಅರನೇಂ? ಅಳ್ಕರಿಂ ಗಿಳಿಸಾಕಿ ಬೆಕ್ಕಿನ ಬಾಯ್ಗೆ ಕುಡುವರೇ?

ಕಂ|| ನೃಪವರ ನಿನ್ನಯ ಕಾಪಿಂ |
ಉಪವನದೊಳ್ ಬಳೆದ ಪೌರರೆಂಬೀ ಗಿಳಿಗಳ್ ||
ಕೃಪಣಂ ದುರ್ಯೋಧನನೆಂ |
ಬ ಪುಳಿಂದನ ಬಸದೊಳೆಂತೊ ಹಾ ಜೀವಿಸುಗುಂ ||೨೯||

ಯುಧಿಷ್ಠಿರಂ.–ಎಲೇ ಮಹಾಶಯರೇ! ನೀಂಗಳ್ ಅಲ್ಲಿಯಿಂ ಇತ್ತಲ್ ಐತಂದುದು ಎಮ್ಮ ಪುಣ್ಯವಿಶೇಷಮೆ. ಆದೊಡೆ ಎಮ್ಮೊಡನೆ ನೀಮುಂ ಈ ಕಾಡಿನೊಳ್ ಕ್ಲೇಶಂಬಡುತಿರೆಯಿರೆ ಆಂ ಎಂತು ನೋಡಿ ಸೈರಿಸುವೆಂ? ನೀಂ ಎಂತಾನುಂ ಹಸ್ತಿನಾಪತಿಯುಂ ಸೇರ್ದು ಪದುಳಮಿರ್ಪುದು ಉಚಿತಮಲ್ತೆ?

ಪ್ರಜೆಗಳ್.–ಮಹಾನುಭಾವರ್ ನೀಂಗಳ್ ಕ್ಲೇಶಂಬಡುತಿರ್ಪಂದು ಎಮತು ಪದುಳಮೇಂ? $ ನಿಮತು $ ಊಳಿಗದೊಳ್ ತಾಂಗಿದ ಎಮತ್ತು ಮನಂ ನಿಮ್ಮಂ ನೀಗಿ ನೀಚದುರ್ಯೋಧನನ ರಾಜಧಾನಿಯುಂ ಪುಗಲ್ ಎಂತು ಬಕ್ಕುಂ?

ಯುಧಿಷ್ಠಿರಂ.–(ಅಂಜಲಿಬಂಧಮೊಡನೆ) ನಾಡಿಗರಿರಾ! ನಿಮ್ಮೊಳ್ ಎನತು ಬಿನ್ನಪಮೊಂದಿರ್ಕುಂ. ನೀಮದನೆಂತಾನುಂ ನೇರ್ಪಡಿಪ್ಪುದು.

೨೯. ಪುಳಿಂದನ–ಬೇಡನ, ಬಸದೊಳ್–ವಶದಲ್ಲಿ. ನಿಮತು–ನಿಮ್ಮದಾದ.

ಪ್ರಜೆಗಳ್.-ಮಹಾರಾಜನೆ ! ಅದೇಂ ನಿಯೋಗಿಪುದು.

ಯುಧಿಷ್ಠಿರಂ.-

ವೃ ॥ ಪಳುವಿಂಗೆಯ್ದಿದರೆನ್ನ ಮಕ್ಕಳಕಟಾ ನಾನೆಂತಗಲ್ದಿರ್ಪೆನೆಂ । ದಳಲಿಂ ಗೋಳಿಡುತಿರ್ದಪಳ್ ಮುದುಪಿಯೆಮ್ಮಮ್ಮಾತೆ ತಾನಾವಗಂ ॥ ಪೊಳಲಂ ಸೇರುತ್ತುಮೀಗಳೀ ಪದೆಪಿನಿಂ ಕಂಡಾಕೆಯಂ ತಳ್ತು ತ । ಲ್ಲಳಮಂ ಮೆಲ್ಲನೆ ತಕ್ಕ ನಲ್ನುಡಿಗಳಿಂ ಮಾಣಿಪ್ಪುದೊಂತಾದೊಡಂ ॥ ೨೭ ॥

ಪ್ರಜೆಗಳ್.-(ದುಗುಡದಿಂ) ಎಲೆ ಮಹಾರಾಜನೆ ! ನೀಂ ಇಂತು ಧರ್ಮಪಾಶದಿಂ ಎಮ್ಮಂ ಬಾಧಿಪ್ಪುದೇ ? ಅಕಟ ! ಆಂ ಎಂತು $ ಮರಲ್ವುದು ? $

ಯುಧಿಷ್ಠಿರಂ.- ಎಲೆ ಸಜ್ಜನರಿರ ! ದಯೆಯಿಟ್ಟು ನೀಂ ಅಂತು ಗೆಯ್ಯುವುದು.

ಪ್ರಜೆಗಳ್.-ರಕ್ಷಿತಾರನಾಥ ನಿನ್ನ $ಬೆಸನಂ$ ಎಂತು ನಾಂ ಮೀಱುವುದು ? ಬೀಳ್ಕುಡು. ಆಂ ಪಯಣಂಬೋಗಿ ಕೆಲದಿನಂ ಅತ್ತಲಿರ್ದು ಮಗುಳ್ದು ನಡೆತಪ್ಪೆವು.

ಯುಧಿಷ್ಠಿರಂ– ಅಂತಕ್ಕೆ.

ಪ್ರಜೆಗಳ್.-ಇಲ್ಲಿಂ $ಪಡಮಗುಳಲ್$ ಮನಂ ಬಲ್ಲದು. ಏಗೆಯ್ವಂ?

(ಎಂದು ಪೋಪರ್)

ಯುಧಿಷ್ಠಿರಂ -(ಧೌಮ್ಯನಂ ನೋಡಿ) ಪೂಜ್ಯರೆ! ಪಜ್ಜೆಯಿಡುವುದು, ಮುಂದಣಮಂ ಎಯ್ದುವಂ. ಇತ್ತಲಿರೆ –

ಕಂ ॥ ಇನ್ನಾನಾಡಿಗರೆಲ್ಲರು ।
ಮೆನ್ನನದೊಚ್ಚಣದೊಳೆಯ್ದಿ ಸುತ್ತುಂಗೊಳ್ಗುಂ ॥
ಮುನ್ನಿನವೋಲವರಂ ಮೈ ।
ಪ್ಪನ್ನಿದಿನುಪಚರಿಸಲಾರ್ಪೆನೆಂತೀ ಪಳುವೊಳ್ ॥೨೮॥

ಮರಲ್ವುದು–ಹಿಂತಿರುಗುವುದು. ಬೆಸನಂ–ಆಜ್ಞೆಯನ್ನು. ಪಡಮಗುಳಲ್–ಹಿಂದಿರುಗಲು. ೨೮. ಒಚ್ಚಣದೊಳ್–ಒಂದು ಕ್ಷಣದಲ್ಲಿ

ಧೌಮ್ಯಂ -ಮಹಾರಾಜನೆ! ಚಿಂತೆಯಿಂದಿರ್ಕೆ, ಮುಂತಣ್ಗೆ ಪೋಪಂ. (ಎಲ್ಲರುಂ ಇನಿತುದೂರಂ ಪೋಪರ್)

ಯುಧಿಷ್ಠಿರಂ.-(ಮುಂತೆ ನೋಡಿ) ಪೂಜ್ಯರೆ! ಇದಾವುದು ಗಡ ಬೆಳ್ಪನೆ $ ಬೆಳ್ಪಂಗೆಡೆವ $ ಪುಣ್ಯಕರಂ ಪೊನಲ್?

ಧೌಮ್ಯಂ -ಇದು ಗಡ ಲೋಕಪಾವನೆಯಪ್ಪ ಗಂಗಾನದಿ.

ಯುಧಿಷ್ಠಿರಂ - ಆಃ! ಭುಕ್ತಿಮುಕ್ತಿಪ್ರದಾಯಿನಿಯಪ್ಪ ಈ ಜಗಜ್ಜನನಿಯ ಸಂದರ್ಶನದಿಂದೆ ಧನ್ಯರಾದೆವು. (ಎಂದು ಗಂಗೆಯನಧಿಕರಿಸಿ)

ವೃ|| ಸಗರೋದ್ಧಾರಿಣಿ ಪಾಪಹಾರಿಣಿ ಮಹಾಸಂಸಾರಸಂತಾರಿಣೀ। ಜಗದಾಹ್ಲಾದನಕಾರಿಣೀ ಶಿವಜಟಾಜೂಟಾಂತರಾಜನ್ಮಣೀ||
ನಿಗಮಾತ್ಮೈಕವಿಹಾರಿಣೀ ತ್ರಿಸರಣೀ ಯೋಗೀಂದ್ರಹೃಚ್ಚಾರಿಣೀ।
ಭಗವದ್ದಿವ್ಯತರಂಗಿಣೀ ಮಣಿದಪೆಂ ಸಾಕ್ಷಾತ್ಸುಧಾಧೋರಣೀ||೨೯||

ಕಂ|| ಸನ್ನುತೆ ದೂರದೊಳೊರ್ಮೆ ಭ।
ವನ್ನಮಸ್ಕೃತಿಯನೆಸಪರಮಳನರೆನ ತಾಂ||
ನಿನ್ನಯ ತಡಿಯೊಳ್ ಮೆಯ್ಯಿ।
ಪ್ಪರ್ನ್ನೆವರಂ ವಸಿಪರಿನ್ನದೇಂ ಸುಕೃತಿಗಳೋ||೩೦||

ಕಂ|| ಸ್ವಸ್ತಟನಿ ಮಹಾಪರತರ।
ವಸ್ತುವೆನಿಪ್ಪಾಪುರಾರಿ ನಿನ್ನನದೆಂತುಂ||
ಮಸ್ತಕದೊಳ್ ತಾಳ್ದಪನೆನೆ।
ನಿಸ್ತುಳವದು ನಿನತು ಮೈಮೆಯೇಂ ಕೇವಳಮೋ||೩೧||

(ಎಂದು ಭೀಮಾದಿಗಳಂ ಆಲೋಕಿಸಿ) ವತ್ಸರಿರಾ! ಅಚ್ಚವಪ್ಪ ಈ $ ಪೊಚ್ಚದೊಳ್ ಬರ್ಕುಡಿತೆಯ $ ನೀರನಾದೊಡಂ ಇಚ್ಛೆಯಿಂ ಈಂಟಿ ತಣಿಯಿಂ.

---

ಬೆಳ್ಪಂಗೆಡೆವ-ಪ್ರವಹಿಸುವ ೨೯ ತ್ರಿಸರಣೀ-ತ್ರಿಪಥಗೆ ೩೦ ಎಸಪರ್-ಮಾಡುವರು, ಇರ್ಪನ್ನೆವರಂ-ಇರುವವರೆಗೆ ೩೧ ನಿಸ್ತುಳಂ-ಹೋಲಿಕೆಯಿಲ್ಲದ; ನಿನತು-ನಿನ್ನದು ಪೊಚ್ಚದೊಳ್-ಪ್ರವಾಹದಲ್ಲಿ ಬಕ್ಕುಡಿತೆಯ-ಬಂದು ಬೊಗಸೆಯ.

ಭೀಮಂ – ಈಗಳಿನ ಎನ್ನ ಪಸಿವು ಎನಿತನ್ನವುಮಂ ತಿನ್ಪೊಡಂ ಮುಡಿಯದು. ಇಂತಿರೆ ಬಕ್ಕುಡಿತೆನೀರಂ ಈಂಟೆ ತಣಿವುದು ಎಂತು? $ ಏವೆಂ $ ಎನ್ನಂ ಈ ಕಿಡುದಸೆಗೆ ಗುರಿಗೆಯ್ದ $ ಆಕೌರವಾಪಶದಂ $ ಕಣ್ಗೆ ಪೊಲನಾದೊಡೆ ಈಗಡೆ ಆಂ ಈ ಕೊಂತದ ಬಡಿತದಿಂ ಅವಂಗೆ ಅಂತವುಂ ಕಾಣಿಪೆಂ ಗಡ. ಅವನಂ ನೆನೆವ ಎನ್ನ ಮನಂ $ಮುಳಿಸುವೇಗೆಯಿಂಸಿರಿವಂತಿಗೆಯಮುಂಮುರಿಯಂತೆ$ತಪಿಸುಗುಂ.

ಧೌಮ್ಯಂ.–ಕುಮಾರ ಭೀಮನೆ! ಸೈರಿಸು ಸೈರಿಸು. ಮುಳಿವು ದಾಗದು.

ಭೀಮಂ.–ಮುಳಿಸನಾದೊಡಂ ಸೈಸಿದಪೆಂ. ಪಸಿವನಿದಂ ಅದೆಂತು ಸೈರಿಪುದು?

ಧೌಮ್ಯಂ.–ಅದುವುಂ ಇನಿತು ಸೈರಿಸು. ಮುಂತೆ ನಿನಗೆ ತಣಿವಪ್ಪವೊಲ್ ಎಲ್ಲಿಯಾನುಂ $ ನಲ್ಲುಣಿಸು $ ಒದವುಗುಂ.

ಭೀಮಂ.–ಒಳ್ಳಿತು ನಿಮ್ಮ ನುಡಿಯುಂ ಪರಿಕಿಪೆಂ.

ಯುಧಿಷ್ಠಿರಂ–ವತ್ಸ ಭೀಮಸೇನ! ಪೂಜ್ಯರ ನುಡಿ ಎಂದಿಂಗಂ ಬೇರೆಯಾಗದು. ಭೂಸುರರ್ ಮಹಾಮಹಿಮರಲ್ತೆ.

( ತೆರೆಯುಳ್ಳಿ )

ಕಂ॥ ಎಲೆ ದುರ್ಯೋಧನ! ಎಲೆ ಸೌ।
ಬಲ! ಎಲೆ ರಾಧೇಯ! ಎಲವೊ ದುಶ್ಶಾಸನ! ಛೀಃ॥
ಕುಲಹೀನರ್ಕಳಿರಾ! ನಾ।
ಣಿಲಿಗಳಿರಾ! ನಗೆಳ್ದ* ನಿಮ್ಮ ಬಾಳುಂ ಬಾಳೇ॥೩೭॥

ಏವೆಂ–ಏನಮಾಡಲಿ. ಕೌರವಾಪಶದಂ–ನೀಚಕೌರವನು. ಮುಳಿಸುವೇಗೆಯಿಂ–ಕೋಪದ ಬೇಗೆಯಿಂದ, ಸಿರಿವಂತಿಗೆಯ–ಹುರಿವ ಬಡಿನ, ಮುಂಮುರಿಯಂತೆ–ಕಾದ ಮಳಲಂತೆ. ನಲ್ಲುಣಿಸು–ಒಳ್ಳೆಯಆಹಾರ. ೩೨. ನಾಣಿಲಿಗಳಿರಾ–ನಾಚಿಕೆಯಿಲ್ಲದವರೇ!

ಯುಧಿಷ್ಠಿರಂ.—(ಕೇಳ್ದು) ಇದೇಂ ಇತ್ತಲ್ ಭೂಸುರರ್ಕಳ ಕಳಕಳಂ ಕೇಳ್ಗುಂ? (ತಿರುಗಿನೋಡಿ) ಪೂಜ್ಯರೆ! $ ಎನ್ನನ್ನಂ $ ಪಾಪಿಯಿರ್ದಪನೇ? ನೋಡಿರೆ ಇತ್ತಲ್?

ವೃ॥ ಅಡಿಯುಮನಕ್ಕಟಾ ಮುಡಿಯುಮಂ ಬಿಡದಗ್ಗಿ ಪೊಲೋಪೊ ಬಳ್ವಿಸಿಲ್। ಸುಡುತಿರುತಿರ್ದೊಡಂ ಪರಿವ ಕಣ್ಬನಿನೀರ್ವರಿಗಾಲ್ಗಳಿಂದಮಿಂ॥ ತೊಡಲೊಳಗೀಗಳೊಯ್ಯನಿದೊ ತಣ್ಣಸನಾಂಪರಿವಂದಿರೆಂಬಿನಂ।ನಡೆತರುತಿರ್ದಪರ್ ಪೊಳಲ ಭೂಸುರರೆಲ್ಲರುಮಾರ್ತನಾದದಿಂ॥

( ಬಳಿಕ ಭೂಸುರರ್ ಪುಗುವರ್ )

ಭೂಸುರರ್.—

ಕಂ॥ ಎಲೆ ದುರ್ಯೋಧನ! ಎಲೆ ಸೌ।
ಬಲ! ಎಲೆ ರಾಧೇಯ! ಎಲವೊ ದುಶ್ಶಾಸನ ಛೀ॥
ಕುಲಹೀನರ್ಕಳಿರಾ ನಾ।
ಣಿಲಿಗಳಿರಾ ನೆಗಳ್ದು* ನಿಮ್ಮ ಬಾಳುಂ ಬಾಳೇ॥ ೩೪॥

ಛೀ ಪಾಪಿದುರ್ಯೋಧನಾ! ನೀಚಕರ್ಣಾ! ವಂಚಕಶಕುನೀ! ದುಷ್ಟದುಶ್ಶಾಸನಾ! ಊ ಕುಟಿಲರ್ ನೀವೆಲ್ಲರುಂ ಬಡಗೂಡಿ ಬಯ್ಕಟ್ಟನಿಂ ಮಹಾತ್ಮರಂ ಪಾಂಡವರಂ ಎತ್ತಲ್ ಕಳಿಪಿದಿರ್? ಎಂತು ನಿಮ್ಮ ಮನಂ ಬಡಂಬಟ್ಟುದು? ಹಾ! ಧರ್ಮಾತ್ಮರ್ ಧರ್ಮಜಾದಿಗಳ್ ಎಲ್ಲಿಯೆಲ್ಲಿ ಪುಡುಂಕಿಗೊಡಂ ದೊರೆತರಿಲ್ಲ ಗಡ.

ಯುಧಿಷ್ಠಿರಂ—(ಕೆಲನಂ ಸಾರ್ದು) ಪೂಜ್ಯರಿರ! ಇತ್ತಲಿರ್ಪ ಯುಧಿಷ್ಠಿರಂ ಈ ವಂದಿಸಿದಪಂ. ಇತ್ತ ತಣ್ಣೆಳಲೊಳ್ ಕುಳ್ಳಿರ್ದು ಇನಿತು ವಿಶ್ರಾಂತಿಯನೆಯ್ದುವುದು.

---

ಎನ್ನನ್ನಂ—ನನ್ನಂತವನು. ೩೩ ಕಣ್ಬನಿನೀರ್ವರಿಗಾಲ್ಗಳಿಂದಂ—ಕಣ್ಣೀರ ಹರಿವ ಕಾಲುವೆಗಳಿಂದ, ಒಯ್ಯನೆ—ನೆಟ್ಟಗೆ, ತಣ್ಣಸಂ—ತಣ್ಪನ್ನು.

ಭೀಮಂ – (ಸ್ವಗತಂ) " ಮಳೆಪನಿ ಬಿಟ್ಟೊಡಂ ಮರದ ಪನಿ ಬಿಟ್ಟುದಿಲ್ಲಂ" ಎಂಬ $ ನಾಳ್ನುಡಿಯಂತೆ $ ನಾಡಿಗರ ಕಾಟಂ ತಪ್ಪಿದೊಡಂ ಈ ಪಾರ್ವರ ಕಾಟಂ ತಪ್ಪಿದುದಿಲ್ಲಂ.

ಭೂಸುರರ್ –(ನೋಡಿ) (ಸ್ವಗತಂ)ಎಲೆ! ಇದೇಂ $ ಬಿಸವಂದಂ. $ ಆಂ ಅದೇಂ ಧನ್ಯರೋ! ಇದೆಕೊಳ್ ಈತನೆ ಮಹಾರಾಜಯುಧಿಷ್ಠಿರಂ. ಅತ್ತಲ್ $ ಕೆಕ್ಕೆಯೊಳ್ $ ಕೆಂದಳಮಂ ಇಟ್ಟು ಚಿಂತಿಸುತಿರ್ಪ $ ಮಾಹದಿಬದೆ $ ದ್ರೌಪದಿಯಿಂದಮುಂ ಪೂಜ್ಯರ್ ಧೌಮ್ಯರಿಂದಮುಂ ಕೂಡಿ ಕುಳ್ಳಿರ್ಪ ನಾಲ್ವರುಂ ಭೀಮಾರ್ಜುನನಕುಲಸಹದೇವರ್. ಭಗವಂತಾ ಎಂತುಂ ಎಮಗೆ ಈ ನೇರಿದರ ಸಾವಾಸಂ ಬದವುವವೊಲ್ ಎಸಗಿದನಲ್ತೆ. (ಯುಧಿಷ್ಠಿರನಂ ಕುರಿತು) ಮಹಾರಾಜನೆ! ನಿಮಗೆ ಮಂಗಳಮಕ್ಕೆ.

ಕಂ|| ಕುದಿಯುತೆ ಪಿಪಾಸೆಯಿಂ ಮುಗಿ |
ಲೊದವಂ ಕಂಡಮನು ನಲ್ವ ಚಾದಗೆಗಳವೋಲ್ ||
ಇದೆ ಕೊಳ್ಗುದಿಗುದಿವಾವತಿ |
ಮುದವೊಂದಿದೆವಿಂದು ನಿಮ್ಮ ಕಾಣ್ಕೆಯು ಪೆಂಪಿಂ|| ೨೫ ||

ಯುಧಿಷ್ಠಿರಂ –ಪೂಜ್ಯರ್ಕಳಿರಾ!

ಕಂ|| ಮುಂ ತೊಡಗಿದ ಮಾಪಾಪದಿ |
ನಿಂತುಟು ವನವಾಸವೆಮಗೆ ದೊರೆತುದು ಸಾಜಂ ||
ಚಿಂತಿಸದೆ ನೀಮುಮುಕಟ ವ |
ನಾಂತಕೆ ಪಚ್ಚೆಲೆಯನೊಲ್ದು ತಿನಲೆಯ್ದುವುದೇ || ೨೬ ||

---

ನಾಳ್ನುಡಿ–ಗಾದೆ ಬಿಸವಂದಂ–ಶ್ಚರ್ಯ. ಕೆಕ್ಕೆಯೊಳ್–ಕಪೋಲದಲ್ಲಿ. ಕೆಂದಳಮಂ–ಕೆಂಪಗಿರುವ ಕರತಲವನ್ನು. ಮಾಹದಿಬದೆ–ಮಹಾಪತಿವ್ರತೆ ೨೫ ನಲ್ವ–ಸಂತೋಷಿಸುವ, (ಬಲ್ಧಾತುವಿನಂತೆ ನಲ್ಧಾತುವೂ ಉಂಟು. ನಲ್ಮೆಯೆಂಬುದು ಈ ಧಾತುವಿನ ಭಾವನಾಮ) ಕೊಳ್ಗುದಿಗುದಿವ–ಬಹುವಾಗಿ ಸಂತಪಿಸುವ.

೨೬. ಪಚ್ಚೆಲೆಯಂ–ಹಸಿದಾದ ಎಲೆಯನ್ನು.

ಮತ್ತಂ ನೀಂ ಅಡವಿಯುಂ ನೋಡಿದರಲ್ತು. ಎಲ್ಲಿಯುಂ $ ಸರುಗಳ್ ಪಣೆಗಳ್ $ ಬಳವು. ನಿಚ್ಚಂ ಬಳಸುತ್ತುಂ $ ಮಾಮಸಕದಿಂ $ ಅಪ್ಪಳಿಸುತ್ತುಂ ಪಜ್ಜೆವಜ್ಜೆಗೆ ಕಣ್ಗೆವರ್ಪ ಸಿಂಗಂ ಪೆರ್ವುಲಿ ಸೊರ್ಕಿನ ಪೇರಾನೆ ಎಂಟಡಿ ಕರಡಿ ಎಕ್ಕಲಂ ಕೋಣಂ ಮುಂತಾದ ಪಲವುಂ ಕೂರ್ಮಿಗಂಗಳ್ $ ಅಳುಂಬಂ $ ಅವರತ್ತಣಿಂ ನಿಮಗೆ ಅದೇನಾನುಂ ಎಡರೊದವಲಕ್ಕುಂ. ಅದರಿಂ ಆರಯ್ದು ರಾಜಧಾನಿಯುಂ ಸೇರ್ದು ಸ್ವಸ್ತಿಯಿಂ ಬರ್ದುಕಿಂ. ಮೇಣ್ ಬನದೆ ಕಂದಮೂಲಮಂ ನೀಂ ಉಣಲಕ್ಕುಮೆ?

ಭೂಸುರರ್— ಮಹಾರಾಜನೆ! ಮೆಲ್ನುಡಿಯಿದು ಎಮಗಲ್ತು. ಬಾಹತ್ತರದ ಬಾಹಾಬಲದ ಬಾಹುಜರ್ ನೀವೆ ಕಂದಮೂಲಮಂ ಉಣ್ಬರಾಗಿರೆ $ ಬರುಂಬರ್ $ ಪಾರ್ವರ್ ಆಂ ಅದಂ ಉಣಲಾಗದೊ? ನಿಮಗಪ್ಪ ಕಂದಮೂಲಾಹಾರಮೆ ಎಮಗಂ ಅಲ್ತು. ಸನ್ನುತಮಪ್ಪ ಪನ್ನತಿಕೆಯುಂ ಆಂತ ನಿಮ್ಮೊಡನೆ ಇರೆ ಕೂರ್ಮಿಗಂಗಳತ್ತಣಿಂ ಎಡರೆಂಬುದುಂ ಇರ್ಪುದೆ? ಆವೆಂತುಂ ಬೆನ್ನನ ಬಂಥೆಪೆವು. ನಿಮ್ಮನೆ ನಂಬಿದ ನಿರಪರಾಧರಂ $ ಬರುವರಂ $ ಎಮ್ಮಂ ಓಸರಿಪುದು ಪೆಸರ್ವೆತ್ತ ನಿಮಗೆ ಅದೆಂತುಂ ತಗದು. ನಿಮಗಪ್ಪ ಸೊಗಮೆ ಎಮಗಂ ಅಪ್ಪುದು.

ಭೀಮಂ—(ಆತ್ಮಗತಂ) ಯೋಗಿ ಪಡೆದುದು ಯೋಗಿಗೆ, ಜೋಗಿ ಪಡೆದುದು ಜೋಗಿಗೆ. ಇವರುಂ ಎಮ್ಮಂತೆ ಏಕೆ ಕೋಟಲೆಗೊಳವೇಳ್ಕುಂ?

ಯುಧಿಷ್ಠಿರಂ— ದುಃಖಾರ್ತರ್ ಈವೊಡವುಟ್ಟಿದರ್ ಗೆಡ್ಡೆಗೆಳಸುಗಳಂ ತರಲುಂ $ ಆರ್ತರಲ್ತು. ಈ ದ್ರುಪದಕುಮಾರಿ ತನಗೊದವಿದ ಮಾನಭಂಗದತ್ತಣಿಂ ನುಡಿಯುನೆ ನುಡಿಯದೆ ಮನದೆ $ ಬೇವಸದಿಂ ಪರ್ಪರಿಕೆವೆತ್ತಿರ್ಪಳ್. ಇನ್ನೆನ್ನ ತೆರನಂ ನಿರವಿಸಲ್ ವೊಗ್ಗೆ?

---

ಸರುಗಳ್- ಮೃಗದ ದಾರಿಗಳು, ಪಣೆಗಳ್—ಮೃಗಗ ರುವ ಸ್ಥಳಗಳು, ಮಾಮಸಕದಿಂ-ಕೋಪೋದ್ರೇಕದಿಂದ; ಅಳುಂಬಂ-ಅಧಿಕ; ಬರುಂಬರ್, ಬರುವರ್-ಬಡವರು, ಆರ್ತರಲ್ತು-ಶಕ್ತರಲ್ಲ, ಬೇವಸದಿಂ-ಚಿಂತೆಯಿಂದ, ಪರ್ಪರಿಕೆ-ಕರ್ಕಶತೆ.

ಎಲೆ ! ಭೂಸುರೋತ್ತಮರಿರಾ —

ವೃ ॥ ಸಿರಿಯುಂ ತೊಟ್ಟನೆ ಬಿಟ್ಟು ಕಟ್ಟಡವಿವೊಕ್ಕಿಂತಕ್ಕಟಾ ದುಕ್ಕಿಪೀ । ದುರದೃಷ್ಟಾತ್ಮನನೇಕೆ ಕೂಡಿದಪಿರೋ ಭ್ರಾಂತಾತ್ಮರಾಗುತ್ತೆ ನೀಂ ॥ ಸರದಾ ನೀರನಗಲ್ದು ದೂರದೆ ಬಿಸಿಲ್ಗಿಂಬಾಗಿ ಬಿಳ್ದಿರ್ಪತಾ । ಮರೆಯುಂ ನೀರಸವೆಂದು ಭಾವಿಸದೆ ಬಂದಾಶ್ರೈಸುವೇ ತುಂಬಿಗಳ್ ॥ ೩೭ ॥

ಸರ್ವಜ್ಞರ್ ನಿಮಗೆ ಪಿರಿದುಂ ಬಿನ್ನವಿಪ್ಪುದೇನಿರ್ಕುಂ ?

ಭೂಸುರರ್—ಎಲೆ ಮಾರಾಯ ! ಆಂ ಇವರಂ ಅದೆಂತು ಪೊರೆದಪೆನೆಂಬ ಮನದಾಳೋಚನೆಯುಂ ಉಳ್. ಆಂ ಎಮ್ಮೊಡಲಂ ಅದಾವಪರಿಯಿಂದಮಾದೊಡಂ ಪೊರೆಯುತ್ತುಂ ನಿಚ್ಚಂ ಭವದೀಯಶ್ರೇಯಃಪ್ರಾರ್ಥನೆಯುಂ ಬಿಡಚರ್ತ್ತುಂ ಇತಿಹಾಸಾದಿಗಳಂ ಹಿರೊವರ್ ಬರೆಯುತ್ತುಂ ನಿಮ್ಮೊಡನೆಯೆ ಇತ್ತಲ್ ಸೊಗದಿಂ ಪೊಳ್ತಂ ನೂಂಕುವೆವು. * ಇಂತಲ್ಲ * ನಾವಿನ್ನಾಪೊಳೊರ್ಗೆ ಪೋಪುದೆಂಬುದು ಪುಸಿ , ಕೇಳ್ —

ಕಂ ॥ ಉಲ್ಲಸಿತಶೀಲ ! ನಿನ್ನಿರ ।
ವಿಲ್ಲದ ನಾಡಿಂಗೆ ನಾಂಗಳಡಿಯಿಡೆವೀಗಳ್ ॥
ಸಲ್ಲಲಿತದೇವವಿಗ್ರಹ ।
ವಿಲ್ಲದ ದೇಗುಲಮನಾರೊ ? ಪೊಕ್ಕಪರಿಳೆಯೊಳ್ ॥ ೩೮ ॥

ಯುಧಿಷ್ಠಿರಂ—ಪೂಜ್ಯರಿರ ! ಪಾಡಳಿದು ಪಲವುಂತೆರದೆ ಕ್ಲೇಶಂಬಡುತುಂ ನಿಮ್ಮನಿಮ್ಮ ಯೋಗಕ್ಷೇಮಭಾರಮಂ ನೀಮೆ ಪೊರುತ್ತುಂ ಉಮ್ಮಳಿಸುತಿರೆಯಿರೆ ನಿರ್ಭಾಗ್ಯಂ ಆಂ ಈಪಾಳ್ಗಣ್ಣಿಂ ಅದೆಂತು ನೋಡುವೆಂ ? ಅಕಟಾ !

ಇಂತಲ್ಲ—ಇಂತಲ್ಲದೆ , ೩೮ ದೇಗುಲಮಂ—ದೇವಾಲಯವನ್ನು.

ವೃ|| ಪಗೆದೇಂ ನಿಂದಳ್ ಓ ರಾಜ್ಯಲಕ್ಷ್ಮಿಯಿವನೊಳ್ ನೋಡೆಂಬಿನಂ ಸಾಧುಕೋ । ವಿದರೊಲ್ದೊಪ್ಪವಿನಂ ಪೊದಳ್ದು ಪೊರೆದೆಂ ವಿಶ್ವಂಭರಾಚಕ್ರಮಂ || ಇದೆ ನಿರ್ಭಾಗ್ಯತೆವೆತ್ತು ಭೋಂಕನೆ ಮಹಾಶೋಕಕ್ಕೆ ಪಕ್ಕಾದೆನೈ । ಬಿಡಿಯೋ ! ನಿನ್ನಯ ವೈಮೆಯೆಂಬುದಮುಮಾ!! ನೋಡಲ್ಕದೇಂ ಚೋದ್ಯಮೋ || ೩೯ ||

( ಎಂದು ದುಃಖಮಂ ಅಭಿನಯಿಸಂ )

ಧೌಮ್ಯಂ—ಮಹಾರಾಜನೆ ! ಏಕಿಂತು ದುಃಖಿಪೆ ? ಸಮಾಹಿತನಾಗೈ.

ಯುಧಿಷ್ಠಿರಂ—ಪೂಜ್ಯರೆ !

ವೃ || ಅನುವಿಂ ಬಿನ್ನವಿಸುತ್ತುಮಾಂ ಪಲತೆರಂ ಬೇಳ್ಪಂಗಡಾಪಾರ್ವರೆ । ಳ್ಗನಿತುಂ ಲಾಲಿಸರೀಗಳೆನ್ನೊಡವರಲ್ ಸನ್ನದ್ಧರಾಗಿರ್ದಪರ್|| ಮನವೊಲ್ದರ್ಥಿಪಿಪಂದಿರಂ ಪೊರೆಯಲುಂ ಬನ್ನಂಬಡಲ್ ಘೋರಕಾ । ನನದೊಳ್ ಬೆನ್ನನೆಬನ್ನಿಮೆಂದೊರೆಯಲುಂ ನಾನಾರೆನೇಗೈದಪೆಂ ||೪೦||

ಧೌಮ್ಯಂ— ಮಹಾರಾಜನ! ಎನ್ನ ಬಿನ್ನಪವೊಂದಿರ್ಕುಂ ಆಲಿಸ.

ಕಂ || ಸೊಗವೊದವಿದ ಪೊಳ್ತನೊಳಂ ।
ದುಗುಡದ ಪೊಳ್ತನೊಳಮಾಣ್ಮನಂ ಜನವೊಂದೇ ||
ಬಗೆಯಿಂ ಸೇವಿಪುದುಚಿತಂ ।
ಬಗೆ ನೀನಿವರಿಂದು ನಿನ್ನನಂತುಟು ತೊರೆಗುಂ || ೪೧ ||

ಮತ್ತಂ ಇವರ ರಕ್ಷಣಭಾರಮಂ ಒಪ್ಪುಗೊಂಡು ಪೊತ್ತಿರ್ಪ ನೀನುಂ ಇವರಂ ತೊರೆವುದು $ ತಗದು. $ ಎಂತೆನೆ —

---

ತಗದು—ಯುಕ್ತವಲ್ಲ,

ವೃ ‖ ಪರಮೇಶಂ ಕೊರಲತ್ತಣಿಂದೆ ಬಿಸಮಂ ತಾನೀಗಳುಂ ವರ್ಜಿಸಂ । ತಿರೆಯುಂ ತನ್ನಯ ಬೆನ್ನೊಳೊಂದೆತೆರದಿಂ ಪೊತ್ತಿರ್ಕುಂ ಮಾಕೂರ್ಮನುಂ ‖ ಧರಿಸಿರ್ಕುಂ ಬಡಬಾಗ್ನಿಯುಂ ಬಸಿರೊಳಾರತ್ನಾಕರಂ ಸಂತತಂ। ಪರಿಪಾಲಿಸ್ವರದಾವಗಂ ಸುಕೃತಿಗಳ್ ತಾವೊಪ್ಪಿಕೊಂಡಿಪ್ಪುದಂ ‖ ೪೨ ‖

ಯುಧಿಷ್ಠಿರಂ- ಅಂತಪ್ಪೊಡೆ ಇನ್ನೇಂಮಾಳ್ಪುದು? ಎಮ್ಮ * ಪಸುಗೆಗೆ * ಬಂದುದಂ ಇವರುಂ ಅನುಭವಿಸವೇಳ್ಕುಂ.

ಭೂಸುರರ್-ಅಹಹ ಆಂ ಧನ್ಯರಾದೆವು.

ಯುಧಿಷ್ಠಿರಂ-ತೆರಳಿಂ. ಎಲ್ಲರುಂ ಮುಂತಣ್ಗೆ ಪೋಪಂ. (ಎಂದೆಲ್ಲರೊಡನೆ ಕಿರಿದು ದೂರಂ ಸಾರ್ದಪಂ)

ಭೀಮಂ- ಆರ್ಯ! ಕ್ಷುದ್ಬಾಧೆಯುಂ ಸೈಸಲಾರೆಂ ಸೈಸಲಾರೆಂ.

ಯುಧಿಷ್ಠಿರಂ-ಪೂಜ್ಯರೆ! ಈ ನಡುವಗಲೊಳ್ ಈಯುಣುಗರುಂ ಪಾರ್ವರುಂ ಪಸಿವಿನಿಂ ತಳಮಳಂಬಡುತಿರ್ದಪರ್. ಇಂದು ಅರಣ್ಯದೊಳ್ ಇವರ್ಗ್ಗೆ ಅದಾರ್ ಸವಿಗೂಳಂ ಉಣಲಿಡುವರ್? "ಕಾಡಿನೊಳ್ ಪೊಂಬಾಳೆಯುಂ ಬಯಸಿದಂತೆ" ಗಡ. ಇದರ್ಕ್ಕೆ ಅದೇಗೆಯ್ದಪೆಂ? ಮುಂತೆ ಎನಗೆ ಮಾಳ್ಪುದೇ ತೋರದು.

ಕಂ ‖ ಜನಪತಿಪದಮುದು ಜಗುಳ್ದ*ರೆ ।
ಯೆನಗಾಭ್ಯೈಕ್ಷಮುಮಧರ್ಮವಲ್ತೊಡಮಿಾ ‖
ಬನದೊಳಗಾಲಿಪರಾರ್? ಸು ।
ಮ್ಮನೆ ಭಿಕ್ಷಾಂಭವತಿದೇಹಿ ಎಂದಲೆಯಲೊಡಂ ‖ ೪೩ ‖

---

ಪಸುಗೆಗೆ-ಭಾಗಕ್ಕೆ.

ಧೌಮ್ಯಂ - ಇದರ್ಕ್ಕೆ ಏಕೆ ಚಿಂತಿಪೈ ? ಆಂ ಉಪದೇಶಿಪ ಮಂತ್ರದಿಂ ತ್ರೈಲೋಕ್ಯಾವನಧುರ್ಯನಂ ವರದವರ್ಯನಂ ಸಕಳಸುರಾಸುರವಿನುತಚರ್ಯನಂ ಜಗದಾಚಾರ್ಯನಂ ಆರ್ಯನಂ ಸೂರ್ಯನಂ ಆರಾಧಿಸು. ನಿನಗೆ ಆತಂ ಪ್ರಸನ್ನನಾದಪಂ.

ಯುಧಿಷ್ಠಿರಂ.-ಪೂಜ್ಯರೆ ! ಅದಾವಮಂತ್ರಂ ? ಅನುಗ್ರಹಿಸವೇಳ್ಕುಂ.

ಧೌಮ್ಯಂ.-ಆಲಿಸು (ಎಂದಾತನ ಕಿವಿಯೊಳ್ ಪೇಳ್ದಪಂ)

ಯುಧಿಷ್ಠಿರಂ-(ಕಿರಿದು ಬೇಗಂ ಆ ಮಂತ್ರಮಂ ಜಪಿಸುವಂತೆ ಅಭಿನಯಿಸಿ ಬಳಿಕ ಸೂರ್ಯನಂ ತುತಿಪಂ)

ವೃ ॥ ಅಮಿತಕರಕಲಾಪಾ ಸರ್ವಲೋಕಪ್ರದೀಪಾ ।
ಶಮಿತನಿಖಿಲಪಾಪಾ ಸರ್ವವೇದಸ್ವರೂಪಾ ॥
ಸುಮತಿವಿನುತಿಪಾತ್ರಾ ವಾರಿಜಸ್ತೋಮಮಿತ್ರಾ ।
ನಮಿಸುವೆನೆಲೆಮಿತ್ರಾ ಭಾಸ್ಕರಾ ಲೋಕನೇತ್ರಾ ॥ ೪೪ ॥

ಎಲೆ ಮಹಾನುಭಾವ ಸೂರ್ಯನೆ ! ನೀಂ ಸಕಳಕರ್ಮಫಲಾತ್ಮಕಂ. ನಿನ್ನಿಂ ಪರದೈವಂ ಅದಾವುದು ? ನೀನೆ ಸಕಲಜಗಕೆ ಆಧಾರಂ. ಸಕಲಮುಂ ನಿನ್ನಯೆ ತೇಜದಿಂಗಡ. ಮಾಯೋಗಿಗಳುಂ ನಿನ್ನಯೆ ಆರಾಧನದಿಂ ಕೃತಾರ್ಥರಪ್ಪರ್.

ವೃ ॥ ನಿನ್ನಯೆ ತೇಜದಿಂ ನೆಲದೆ ನಲ್ವೆಳೆಯುಪ್ಪುದು ತಕ್ಕಕಾಲದೊಳ್ । ನಿನ್ನಯೆ ತೇಜದಿಂ ಬೆಳೆಯುತಿರ್ಪುದು ಸಸ್ಯಸಮೂಹಮೆಲ್ಲಮುಂ ॥ ನಿನ್ನಯೆ ತೇಜದಿಂ ಜಗಮಿದೆಲ್ಲಮುಮನ್ನಮನೊಂದಿ ಬುಂಜಿಕುಂ । ನಿನ್ನಯೆ ತೇಜದಿಂ ಜನಮರೋಗದೃಢಾಂಗತೆವೆತ್ತು ಜೀವಿಕುಂ ॥ ೪೫ ॥

ಕಂ॥ ನಟ್ಟಡವಿಯೊಳೀಪರಿಯಿಂ ।
ಕಟ್ಟಿದವಳಲಿಂದೆ* ತೊಟ್ಟನೆರ್ದೆಗೆಟ್ಟಿಮ್ಮಂ ।
ಕೊಟ್ಟು ನಿಜಾಭೀಪ್ಸಿತಮಂ ।
ನೆಟ್ಟನೆ ಪೊರೆಯಲ್ಕೆ ನೀನೆ ನೆರೆದಪಯಲ್ತೆ ॥ ೪೬ ॥

(ಬಳಿಕ ಸೂರ್ಯಂ ಗಗನದತ್ತಣಿಂ ಘಟ್ಟನೆ ಸನಿಹಕ್ಕೆ ಬಂದಪಂ)

ಸೂರ್ಯಂ-ಎಲೆ ರಾಜಪರಮೇಶ್ವರಾ! ನಿನ್ನ ಮನೋಭಾವಕೆ ಮೆಚ್ಚಿದೆಂ. ಇಂ ಪನ್ನೆರಳ್ವಲಂ ನಿಮಗೆ ದಿವ್ಯಂ ಆಹಾರಂ ಬದವುಗೆಂದು ಆಂ ವರವಂ ಇತ್ತಿರ್ಪೆಂ. ಇದೆಕೊಳ್ ತಾಮ್ರಭಾಜನಂ. ಇದಂ ಕೈಕೊಳ್ವುದು. ಈ ದ್ರೌಪದಿ ಅಕ್ಷಯಮಪ್ಪ ಇದರ ಸೋಂಕಿನಿಂದಮೆ ನಿಮಗೆ ಇಷ್ಟಕಾಲಂಗಳೊಳ್ ಇಷ್ಟತಮಮಂ $ ಬಿರ್ದಿನಸಂ ಎಸಗಿಪರಿವೇಷಿಕೆ$ ಭೋಂಕನೆ ನಿಮಗೆ ಪರಮೇಶ್ವರಾನುಗ್ರಹಂ ಸಮನಿಕ್ಕುಂ. ಮಗುಳ್ದು ನಿನಗೆ ಪದಿನಾಲ್ಕನೆಯ ಬರಿಸದೊಳ್ ರಾಜ್ಯಲಾಭಂ ಅಕ್ಕುಂ (ಎಂದು ಪಾತ್ರೆಯನಿತ್ತು ಕಳ್ಕನೆ ಮೆಯ್ಗರೆವಂ)

ಯುಧಿಷ್ಠಿರಂ-ಅಹಹ! ಇದೇಂ ಸೋಜಿಗಂ ಪೂಜ್ಯರೆ!

ಕಂ॥ ಮಹಿತದ ನಿಮ್ಮೀಮಂತ್ರದ ।
ಮಹಿಮೆಯಿನಾಂ ಪೂರ್ಣಕಾಮನೆನಿಸಿದೆನೀಗಳ್ ॥
ಮಹನೀಯರ ಸಾವಾಸಂ ।
ಮಹಾಮನೋರಥದಮಂತದೇಂ ಕೇವಳಮೇ ॥೪೭॥

ಯುಧಿಷ್ಠಿರಂ.-ಪೂಜ್ಯರೆ! ಅರ್ಜುನಂಗೆ ಎನಗೆ ಅಂತಪ್ಪ ಸುಜ್ಞಾನದಲೇಶಮುಮಂ ಇರ್ಪುದೆಂದು ನೀಂ ಅರಿವೊಡೆ ಅದು ನಿಮ್ಮ ಸಂಗದಿನಲ್ತೆ? ಎಂತೆನೆ:-

---

೪೬ ಕಟ್ಟಿದವಳಲಿಂದೆ-ಮಹಾವ್ಯಸನದಿಂದ, ಬಿರ್ದಿನಸಂ-ಔತಣದ ಆಹಾರವನ್ನು.

ಕಂ॥ ಉತ್ತಮಬುಧಸಂಗವನೆಸ।
ಗುತ್ತಿರೆ ಮೂರ್ಖಂಗವೊದವುಗುಂ ಸುಜ್ಞಾನಂ॥
ಕತ್ತುರಿಯ ಸಂಗದಿಂದೇಂ।
ಪತ್ತದೆ ಮುಗಮುಗಿಪ ಸೌಸವಂ ಕರಡಿಗೆಗಂ॥೪೮॥

(ದ್ರೌಪದಿಯಂ ಆಲೋಕಿಸಿ) ದೇವಿ! ಅಕ್ಷಯಭಾಜನಮನಿದಂ ಕೈಕೊಳ್. ಎಲ್ಲರುಂ ಕ್ಷುತ್ತಿನಿಂ ಪರಿಪೀಡಿತರಾಗಿರ್ದಪರ್.

ದ್ರೌಪದಿ—ಆರ್ಯಪುತ್ರನ ಆಣತಿಯಂತೆ. (ಎಂದು ಪಾತ್ರೆಯಂ ಕೈಕೊಳ್ವಳ್)

ಯುಧಿಷ್ಠಿರಂ—ಆರೋಗಿಸಲ್ ಎತ್ತಲೈದುವಂ? ಆವತಾಣಂ ಅನುಕೂಲವಾಗಿರ್ದಪುದು?

ಧೌಮ್ಯಂ—(ತಿರುಗಿನೋಡಿ) ಇದೆಕೊಳ್ ಇತ್ತಲ್ ಆದೊಂದು ನೀರ್ದಾಣಂ ಈಕಾಣ್ಗುಂ. ನೀವೆಲ್ಲರುಂ ಅತ್ತಲ್ ಎಯ್ದಿ $ನಿಪ್ಪೊಸತಪ್ಪ$ ನಲ್ಲುಣಿಸಂ ಆರೋಗಿಸಿ ಬನ್ನಿಂ. ಇತ್ತಲ್ ಎತ್ತಲುಂ ಮಾಯಾವಿಗಳ್ ರಕ್ಕಸರ್ ಬಳಸುತಿರ್ದಪರ್. ಅನವರತ್ತಣಿಂ $ಪುಚ್ಚಳಿಯೇನುಂ$ ಒದವದಂತೆ ದಿಗ್ಬಂಧನವಂ ಎಸಗಿ ಮಾಮಂತ್ರಮುಂ ಜಪಿಸುತೆ ನಾಂ ಇಲ್ಲಿಯೆ ಇರ್ದಪೆಂ.

ಯುಧಿಷ್ಠಿರಂ— ಸಕಳವಿಷಯದೊಳಂ ತಮ್ಮತ್ತಣಿಂ ಇಂತು ಕಾಪುಗೊಳ್ವರ್ ಆಂ ಅದೇಂ ಸುಕೃತಿಗಳೋ, ಆದೊಡೆ ತಮ್ಮಂ ಉಳಿದು ಬುಂಜಿಪುದೆಂತೆಂದು ಚಿಂತಿಸಿದಪೆಂ.

ಧೌಮ್ಯಂ—ಮಹಾರಾಜನೆ! ಇಂದು ಕರ್ತವ್ಯಮಪ್ಪ ಎನ್ನ ಆಹ್ನಿಕಂ ಇನ್ನುಂ ಉಳಿದಿರ್ಕುಂ. ಅಂತಲ್ಲದೆಯುಂ ಎನಗಿಂದು ಪಸಿವಿಲ್ಲ.

ಯುಧಿಷ್ಠಿರಂ—ಭಗವದ್ಧ್ಯಾನಾಮೃತಾಸ್ವಾದನದಿಂ ನಿತ್ಯತೃಪ್ತರಪ್ಪ ಪೂಜ್ಯರ್ಗೆ ಎಂದು ಗಡ ಪಸಿವಿರ್ಕುಂ?

---

೪೮. ಸೌಸವಂ—ಸುಗಂಧವು. ನಿಪ್ಪೊಸತು—ಹೊಸಹೊಸತು. ಪುಚ್ಚಳಿ—ಕೇಡು.

ಧೌಮ್ಯಂ-ಭೋಜನಕೇಂ? ಆಂ ನಿಚ್ಚಂ ಸಿದ್ಧನಾಗಿರ್ಪೆಂ. ಅದು ಅಂತಿರ್ಕೆ. ಪೊೞ್ತು ಮೀರುಗುಂ. ನೀವೆಲ್ಲರುಂ ತೆರಳ್ದು ಬುಂಜಿಸಿ ಘಳಲನೆ ಬನ್ನಿಂ.

ಯುಧಿಷ್ಠಿರಂ-ಆಣತಿ. (ಎಂದುೞಿದವರೊಡನೆ ಪೋದಪಂ)

ಧೌಮ್ಯಂ-ಇರ್ಕೆ ಆಂ ತಳ್ವದೆ ಜಪಮುಂ ಉಪಕ್ರಮಿಸಿದಪೆಂ. (ಎಂದು ನಸುವೊೞ್ತು ಧ್ಯಾನಾರೂಢನಾಗಿರ್ಪಂತೆ ಅಭಿನಯಿಸಿ) ಆರರೆ! ಕಾಲಗತಿ ಆರ್ಗಂ ಅರಿಯಲ್ ಅರಿದು. ನವರತ್ನವಿಚಿತ್ರಮಪ್ಪ ಅರಮನೆಯ ಜಗನ್ಮೋಹನಶಾಲೆಯೊಳ್ ಆನಂದದಿಂ ಆರೋಗಿಸುತಿರ್ದ್ದ ಯುಧಿಷ್ಠಿರಮಹಾರಾಜಂಗೆ ಇಂದು ಈ ಕಾಡಿನೊಳ್ ಬಂದು ನೀರ್ಗಾಣದ ಬಕ್ಕಂಬಯಲೊಳ್ ಉಣ್ಬ ಪಾಡು ಆದುದು ಗಡ. (ಚಿಂತಿಸಿ) ಮೇಣ್ ಆರಯೆ ವಿವೇಕಿಕುಲತಿಲಕಂ ಮಹಾಪುರುಷಂ ಅಂತಪ್ಪ ನಶ್ವರಸುಖದ ನವರತ್ನಶಾಲೆಯೊಳ್ ಆರೋಗಿಪುದರಿಂ ಧನ್ಯತೆವಡೆವನೆ? ಮೂಲಾಧಾರಸ್ವಾಧಿಷ್ಠಾನಮಣಿಪೂರಂಗಳೆಂಬ ನೀಲಮರಕತಮಾಣಿಕ್ಯಮಯಮಪ್ಪ ಮೂದೆರದ ತಳಹದಿಯಿಂದಮುಂ, ಅನಾಹತಚಕ್ರಮೆಂಬ ಗೋಮೇಧಿಕಪುಷ್ಪರಾಗಂಗಳ ನೆಲೆಗಟ್ಟಿನಿಂದಮುಂ, ವಿಶುದ್ಧಾಜ್ಞಾಸಹಸ್ರಾರಚಕ್ರಂಗಳೆಂಬ ಸೊಬಗಿನ ಮೇಲಣ ಮೂನ್ನೆಲೆಗಳಿಂದಮುಂ, ರೇಚಕಪೂರಕಸ್ಥಾನಂಗಳೆಂಬ ವಜ್ರವೈಡೂರ್ಯವಾತಾಯನಂಗಳಿಂದಮುಂ, ಬುದ್ಧಿಯೆಂಬ ಅದೊಂದು ಬಳಗಣ ಕಿರುಮನೆಯಿಂದಮುಂ, ಬಿಂದುವೆಂಬ ಅದೊಂದು ಸುಂದರಕಲಶದಿಂದಮುಂ, ತಾವರೆಯೆಳೆಯಂತೆ ಸೂಕ್ಷ್ಮಮೆನಿಸಿ ಪಲಸಾಸಿರ್ಮಿಂಚುವೋಲ್ ಬೆಳಬೆಳಗುವ ಕುಂಡಲಿನಿಯುಂ ಬಳಕೊಂಡು ಮೂಲಾಧಾರದಿಂ ಬ್ರಹ್ಮರಂಧ್ರಂಬರಂ ಪೊಳೆಪೊಳೆಯುತೆ ತಮಮಂ ಪಿಂಗಿಪ ಸುಷುಮ್ನೆಯೆಂಬ ವೈದ್ಯುತಮಹಾದೀಪಿಕೆಯಿಂದಮುಂ, ನಿರ್ಮಳಭಕ್ತಿಯೆಂಬ ತನಿವೆಳಗಿನ ರನ್ನನಿಲ್ಗನ್ನಡಿಯಿಂದಮುಂ, *ಕೈಗೊಳಿಸಿದ* ತರತಗದ ಸದ್ವಿಷಯಂಗಳೆಂಬ ಪವಳಮುತ್ತುಗಳ *ಸೂಸಕಂಗಳ್*

* ಕೈಗೊಳಿಸಿದ-ಅಲಂಕರಿಸಿದ ; ಸೂಸಕಂಗಳ್-ಕುಚ್ಚುಗಳು,

ಅಪೂರ್ವರುಚಿಯಂ ಸೂಸುತಿರೆ, ಮೂಜಗಕ್ಕಂ ಸೋಜಿಗವೆನೆ ವಿಚಾರವೆಂಬ ದೀಪಕಳಿಯಿಂಬುಗೊಳೆ, ಪಜ್ಜಳಿಪ ಬಗೆವಗೆಯ ಆಲೋಚನೆಗಳೆಂಬ ಕಂಡರಿಸಿದ ಚಿತ್ತರದ ಬಜ್ಜರದ $ಪಾಪೆಗಳಿಂದಮುಂ,$ ಆನಂದಲಹರಿಯೆಂಬ $ ಅಂಚೆದುಪ್ಪುಳ ಪಳ್ಕೆ $ ಪಾಸಿರೆ, ಶಮವೆಂಬ ಮಿಸುಮಿಸುಪ $ ಅಸಿಯಮಿಸುನಿವೆಸದ $ ಪೊಸಮೂಡಾವಿ $ ಇಂಬುಗೊಳಿಸಿರೆ, ಸಾತ್ತ್ವಿಕಭಾವವೆಂಬ ಬೆಳ್ಪನೊಪ್ಪುವ ತೆಳ್ದುಗುಲಂ ಬಾಸಣಿಸಿರೆ, ಎಣ್ದೆಸೆಯೊಳಂ ಎಸೆವ ಯಮನಿಯಮಾದ್ಯಷ್ಟಾಂಗಯೋಗಭದ್ರಪೀಠಂಗಳಿಂದಮುಂ, ಸರ್ವೋತ್ತಮವೆನಿಸಿ $ ಅರುವಗೆಯೆಂಬ $ ಕಸವಿನಿತುಮಿಲ್ಲದೆ ಪರಿಶುದ್ಧವೆತ್ತು ಪೆರ್ಮೆಯಾಂತ ನಿಜಹೃದಯವೆಂಬ ನವಮಣಿರಮಣೀಯಜಗನ್ಮೋಹನಶಾಲೆಯೊಳ್, ಪೂರಣೇಂದ್ರಿಯಂಗಳೆಂಬ ಪಡಿಯರರ್ $ಬೆಸನಂ$ ಅಸವಸದಿಂ ಪಾರುತಿರೆ, ಹರಣಂಗಳೆಂಬ ಆಯ್ವರ್ ಮುಖ್ಯಾಧಿಕಾರಿಗಳ್ ಎತ್ತಲುಂ ಪೊರೆಯುತೆ ಮೆರೆಯುತಿರೆ, ಮೈತ್ರಿ ಕರುಣೆ ಮುದಿತೆ ಉಪೇಕ್ಷೆಯೆಂಬ ನಾಲ್ವರ್ ಪ್ರಿಯತಮೆಯರ್ ಬಸೆದು ಓಲಗಿಸುತಿರೆ, ವೈರಾಗ್ಯವೆಂಬ$ಪಿಂಜರಿಯ$ ಪಾವನಪೀಠಮಂ ಅಲಂಕರಿಸಿ ಪುಣ್ಯಪರಿಪಾಕವೆಂಬ ಆದೊಂದು ತೂಗುಂಬಿಜ್ಜಣಿಗೆ ವಿವೇಕವೆಂಬ ಸೊಂಪಿನ ತಣ್ಗಾಳಿಯಂ ಬಿಱಿಸುತಿರೆ, ಅವಿದ್ಯಾಸ್ಮಿತಾರಾಗದ್ವೇಷಾಭಿನಿವೇಶಂಗಳೆಂಬ ಕ್ಲೇಶಂಗಳಂ ಬಯ್ಯನೆ ಕಳೆದು ಪರಬ್ರಹ್ಮಜ್ಞಾನವೆಂಬ ಸಿಚ್ಚಸೊಗಗಮರ್ದ*ಂ ಆರೋಗಿಸುತೆ ಗಡಾ ಧನ್ಯನಕ್ಕುಂ.

( ತೆರೆಯಲ್ಲಿ ಕಲಕಲಂ )

ಧೌಮ್ಯಂ-(ಕೇಳ್ದು) ಅಹಹ! ಇದೇಂ ಸಪ್ಪುಳ್? ( ನೋಡಿ ) ಆಃ ದಿವ್ಯಭೋಜನದೆ ತಣಿತಣಿದು ಕೆಲದೊಳ್ ಬರುತ್ತುಂ $ಕೆಲೆದು$

---

ಪಾಪೆ-ಬೊಂಬೆ, ಅಂಚೆದುಪ್ಪುಳ ಪಳ್ಕೆ-ಹಂಸತೂಲಿಕಾತಲ್ಪ, ಅಸಿಯಮಿಸುನಿವೆಸದ-ಸಣ್ಣಚಿನ್ನಗೆಲಸದ, ಮೂಡಾವಿ-ದಿಂಬು, ಅರುವಗೆ-ಅರಿಷಡ್ವರ್ಗ, ಬೆಸನಂ-ಅಪ್ಪಣೆಯನ್ನು, ಪಿಂಜರಿಯ-ಬೆಳ್ಳಿಯ, ಕೆಲೆದು-ಉತ್ಸಾಹಗೊಂಡು.

ಪಾರುವ ಪಾರ್ವರ ಕೋಲಾಹಳಂ. ಅಮಮ! ಆಗಳ್ ಮಹಾರಾಜಾದಿಗಳೆಲ್ಲರುಂ ನಿರ್ವರ್ತಿತಾಭ್ಯವಹಾರರಾಗಿ ಬಂದರ್.

(ಬಳಿಕೆ ಭೂಸುರರುಂ ಯುಧಿಷ್ಠಿರಾದಿಗಳುಂ ಪುಗುವರ್)

ಭೂಸುರರ್—

ವೃ॥ ಅನಿತು ವ್ಯಂಜನಮೇಂ ಮನಂಗೊಳಿಸುವಾ ಶಾಕಂಗಳೇಂ ಸೂಪಮೇಂ। ಘನಮಪ್ಪಾಕಳ ನಯ್ಯದೇಂ ವಿವಿಧಮಪ್ಪನ್ನಂಗಳೇಂ ಭಕ್ಷ್ಯಮೇಂ॥ ಇನಿವಾಲೇಂ ಪರಮಾನ್ನಮೇಂ ಕಳಲದೇಂ* ದಿವ್ಯೋಪದಂಶಂಗಳೇಂ। ತಿನಲೊಂದೊಂದಮದೊಂದುವೋಲ್ ರುಚಿರಮಾಗಿರ್ದತ್ತದೇವೇಳ್ವುದೋ॥ ೨೪ ॥

ಒರ್ವಂ—ಪುಣ್ಯಶ್ಲೋಕಂಗೆ ಈ ರಾಜಪರಮೇಶ್ವರಂಗೆ ಅಡವಿಯುಂ ಅರಮನೆಯಂತೆವೋಲ್ ಇರ್ದಪ್ಪುದು.

ಅನ್ನೊರ್ವಂ—ಪಾರ್ವ ಇನಿಬರ್ ಪಾರ್ವರ ಸಮಾರಾಧನಂ ಕಣ್ದೆರೆ ವನಿತರೊಳ್ ಸೇರ್ಪಟ್ಟಿತು ಗಡ. ಇವನದೇಂ ಧನ್ಯನೋ.

ಬೇರೊರ್ವಂ—ಎಲ್ ಸಾಸಿರ್ವರ್ ಗೋವಿಂದನೆಂಬುದು ಸುಕರಂ. ಬರ್ಪ್ಪಂಗಿಕ್ಕುವುದು ದುಷ್ಕರಂ. ಇಂತಿರೆ ಇಂತಪ್ಪ ಮಾಸಮಾರಾಧನಂ ನಿರಂತರಂ ‡ಎಕ್ಕಕ್ಕಯಿಂ‡ ನಡೆವುದೆಂದೊಡೆ ಮಹಾರಾಜನ ಪುಣ್ಯವಿಶೇಷಂ ಅಸಾಧಾರಣವಲ್ತೆ.

ಮತ್ತೊರ್ವಂ— ಆಮೇಲೋಗರಂ, ಆಗೊಜ್ಜು, ಆತೆಂಗಾಯ್ಗಜ್ಜಡಿ, ಆಮಾಂಗಾಯ್ವಜ್ಜಡಿ, ಆಹಪ್ಪಳಂ, ಆಸೆಂಡಿಗೆ, ಆತೆರತೆರದ ಬಾಳುಕಂ, ಆಮುಂಡಿಗೆ, ಆಪೂರಿಗೆ, ಆಹೋಳಿಗೆ, ಆಲಡ್ಡಿಗೆ, ಬಾಯ್ಗೆ ಬಿಳ್ದೊಡನೆ ಕರಗಿಪೋಪ ಆಚಕ್ಕುಲಿ, ಆ ಬಗೆವಗೆಯ

---

* ಕಳಲ್—ಮಜ್ಜಿಗೆ, ‡ ಎಕ್ಕಕ್ಕೆಯಿಂ—ಅತಿಶಯದಿಂದ;

ಪೂರಣದ ಕಡುಬುಗಳ್, $ತುಂಬುಂಬೆರೆಯಂತೆ$ ಬಿಳಿದುಂಬಟ್ಟಿತುಂ ಅಗಲಿತುಂ ಎನಿಸಿ ಕಣ್ಗ ಇಂಬಾದ ಆತೆಳ್ವಯ್ಗಡುಬುಗಳ್, ಜೀರಿಗೆ ಮೆಳಸು ಮುಂತಪ್ಪ ಸಂಭಾರಂಗಳಿಂ ಸೊಬಗುಗೊಂಡು,, ಆಂ ಬೆಣ್ಣೆಯಿಂ ಮಿದುವೆನಿಸಿ ಇನ್ನುಂ ತಿನವೇಳ್ಕುಂ ತಿನವೇಳ್ಕುಂ ಎನಿಪ ಅದೊಂದುಪುಳ್ಗ. ಅದೆಂತಿರ್ದುದು. ಇಂತಪ್ಪ ನಲ್ಲುಣಿಸಂ ಪುಟ್ಟಿದಂದಿಸಿಂ ಉಣ್ಡವೆ? ಕಣ್ಡವೆ? ಕೇಳ್ದವೆ?

ಇನ್ನೊರ್ವಂ— ಪಂಜಾಬದೇಶದಿಂಗಿನಿಂ "ಪಂಸೊಂಟಿಯಿಂ" ಪೊರೆದು ಉಪ್ಪಿನಿಂ ಕೂಡಿ ಕರ್ವೇವಿನ ಚಿಗುರೆಸಳಿಂ ಮಗಿಮಗಿಸುತೆ ಶಕ್ರಂಗಂ ದೊರೆಯುಲರಿದೆನಿಪ ಒಗ್ಗರಿಸಿದ ಆತಕ್ರವೇಂ ಈಂಟಲ್ ರಸವತ್ತರವಾಗಿದ್ದುದೋ.

ಇನ್ನೊರ್ವಂ—ಉಣ್ಬೊಡೆ ತರತರದನ್ನಂಗಳ್, ತಿನ್ಬೊಡೆಪರಿಪರಿಯ ತುಪ್ಪದ ಕಜ್ಜಾಯಂಗಳ್, ಕುಡಿವೊಡೆ ಕುಂಕುಮಕೇಸರಂ ಏಲಕ್ಕಿ ಕರ್ಪುರಂ ಘಮಘಮಿಸುತ್ತಿರೆ, ಸಕ್ಕರೆಯಿಂ ಸವಿ ಇಮ್ಮಡಿಯಾಗಿರೆ, ಆವಿನ ನೆಯ್ ತಳ್ತಿರೆ, ತೊಳತೊಳಗುವ $ಕನಕಕಂಸಂಗಳೊಳ್$ ತೆಕ್ಕನೆ ತೀವಿದ $ಕದುಷ್ಣವಪ್ಪ$ ಚಿನಿವಾಲ್. ಏವೇಳ್ವೆಂ ಎಮ್ಮಭೋಗಮಂ.

ಪೆರನೊರ್ವಂ— ಊರೊಳ್ ಕಳೆದ ಕಾರ್ತಿಕಶುಕ್ಲ ದಗಮಿಯಂದು ಎಮ್ಮ ಮಂದಿರದೊಳ್ ಎಮ್ಮ ಜಾನಕೀರಾಮಂಗೆ ಜನ್ಮದಿನೋತ್ಸವಂ ವಿಭವದೆ ಬಳೆದುದಲ್ತೆ. ಅಂದು ಅಟ್ಟ ಅಡುಗೆ ಎಂತು ಇರ್ದುದು? ಪೇಳಿಂ. ಮಾನಿಸರ್ ಅಟ್ಟುದೆ ಅಂತು ರಸವತ್ತರವಾಗಿರ್ದುದು. ಇದಿರ್ವಂದು ನೇಸರೊಸೆದಿತ್ತುದು ಎಂದೊಡೆ ಪೂಣ ಪೇಳ್ವುದೇಂ?

ಯುಧಿಷ್ಠಿರಂ——ಪೂಜ್ಯರೆ! ತಮ್ಮ ಅನುಗ್ರಹದಿಂ ಆವೆಲ್ಲರುಂ ನಿಶ್ಚಿಂತರಾಗಿ ಬುಂಜಿಸಿ ತಣಿದೆವು. ಇರ್ ಅದೆತ್ತಲ್ ತೆರಳ್ವಂ?

---

ತುಂಬುಂಬರೆ—ಪೂರ್ಣಚಂದ್ರ, ಪಂಸೋಟಿಯಿಂ—ಹಸಿಯಕುಂರಿಯಿಂದ; ಕಂಸ—ಪಾನಪಾತ್ರ, ಕದುಷ್ಣ—ಸ್ವಲ್ಪ, ಬಿಸಿದಾದುದು.

(ಮುಂತೆನೋಡಿ) ಇತ್ತಲ್ ಅದೂರದೊಳ್ ಕಾಣ್ಬ ಮಹಾಟವಿ ಇದಾವುದು?

ಧೌಮ್ಯಂ—ಇದು ಗಡ ಕಾಮ್ಯಕವನವೆಂಬುದು.

ಯುಧಿಷ್ಠಿರಂ-ಅಪ್ಪೊಡೆ ಅತ್ತಲ್ ಎಯ್ದುವಂ.

ಧೌಮ್ಯಂ-ಅಂತಕ್ಕೆ, ಆದೊಡೆ ಕಿಮ್ಮೀರನೆಂಬ ಮಾರಕ್ಕಸಂ ಅದೊರ್ವಂ ಅತ್ತಲ್ ಆವಸಿಸುತ್ತಿರ್ದಪಂ ಗಡ.

ಭೀಮಂ-ಆಂ ಇರ್ದಪೆಂ ಗಡ. ಅದೇಕೆ ಚಿಂತಿಪಿರ್? ಆಂ ಇಂದು ದಿವ್ಯಭೋಜನದಿಂ ತಣಿಮ § ಪೀನಂ § ಕೊರ್ವಿರ್ದಪೆಂ. ಚಣದೆ ಕಜ್ಜಂ ಪಣ್ಗುಂ. ತೆರಳ್ವುದು.

ಯುಧಿಷ್ಠಿರಂ-(ಎಲ್ಲರೊಡನೆ ಕಿರಿದೆಡೆ ಸರಿದು) (§ ಸುಟ್ಟಿಸಿ §) ಪೂಜ್ಯರೆ! ಅಭೀಳತರಂ ಈತಾಣಂ ಅದಾವುದು?

ಧೌಮ್ಯಂ-(ನೋಡಿ) ಇದುವೆ ಆಕಿಮ್ಮೀರನ ನೆಲೆವೀಡು.

ಯುಧಿಷ್ಠಿರಂ- ಪೂಜ್ಯರೆ! ಆಂ ಇತ್ತಲ್ ವಸಿಪುದು ಎಂತು?

ಧೌಮ್ಯಂ- ಮಹಾರಾಜನೆ! ಈಬನವೆಲ್ಲಮುಂ ಇಂತು ಅಭೀಳಮಲ್ತು. ಈಬನದ ನಡುವೆ ಆರಕ್ಕಸನ ನೆಲೆದಾಣಮಾದುದರಿಂ ಇಂತು ಘೋರತರಮೆನೆ ತೋರುಗುಂ.

ಯುಧಿಷ್ಠಿರಂ-(ನಾಡೆನೋಡಿ) ಅಹಹ! § ಕರಂಗಿದ § ರಕ್ಕಸನ § ಇಕ್ಕೆದಾಣ § ವಿದು ದುಷ್ಪ್ರವೇಶಮೆ ಗಡ.

ವೃ || ದಿವಮುಂ ಸೋಂಕುವ ಪೆರ್ಮರಂಗಳುರುಬಿಂ ಕರ್ಮಬ್ಬು ಕಣ್ಗೆತ್ತಲುಂ | ಕವಿಗುಂ ಕೂರ್ಮುಗಮಾರ್ಗಮುಳ್ಳಡುಗುಗುಂ ಘೋರೆಂದು ಗೋಮಾಯುಗಳ್ || ಕುವಿಗುಂ ಪಕ್ಕಿಗಳಳ್ಕಿಯಿಂ ಬಗುಳ್ಗುಗುಂ* ನಾಯ್ಗಳ್ ನೆಲಂನಾರುಗುಂ| ಪವನಂ ರೊಯ್ಯನೆ ಪೊಯ್ಗುಮೋಂ ವಿಗಡಮೋ ಮಧ್ಯಂ ಮಹಾರಣ್ಯದಾ || ೫೧ ||

---

ಪೀನಂ— ಹೆಚ್ಚಾಗಿ; ಸುಟ್ಟಿಸಿ— ಬೆರಲಿಂದ ತೋರಿಸಿ, ಕರಂಗಿದ— ಕರಿದಾದ; ಇಕ್ಕೆದಾಣಂ—ವಾಸಸ್ಥಾನವು. ೫೧ ಗೋಮಾಯುಗಳ್-ನರಿಗಳು, ಕುವಿ-ಪಕ್ಷಿಧ್ವನಿ.

( ಎಂದು ಮುಂತಣ್ಗೆ ನಾಲಡಿಯಿಟ್ಟು ) ಪೂಜ್ಯರೆ ! ಇಲ್ಲಿನೋಡಿಂ. ಒಂದೆಡೆ $ ಕನ್ನೀರ $ ಕಾಳ್ಪೊನಲ್ ; ಒಂದೆಡೆ $ ಕೊಟ್ಟಸಂಗಳ ಬಟ್ಟಲ್ ; ಮತ್ತೊಂದೆಡೆ ತೊಲ್ಗಳ ಅಡಕಿಲ್ ; ಬೇರೊಂದೆಡೆ ರುಂಡಂಗಳ ತಂಡಂಗಳ್ ; ಇನ್ನೊಂದೆಡೆ $ ಪಂದಲೆಗಳ ಅಗುಂದಲೆ ,$ ಪೆರತೊಂದೆಡೆ ಅಟ್ಟೆಗಳ ಮೊಟ್ಟೆಗಳ್ ನೋಡೆ ಪೇಸುಗೆಗೊಳ್ಕುಂ.

ಧೌಮ್ಯಂ.—ಮಹಾರಾಜನೆ ! ಆದೊಡೆ ಸುಲಲಿತಮಪ್ಪ ಬೇರೆಡೆಗೆ ಪೋಪಂ.

ಭೀಮಂ.—ಮಾಮಾಯಾವಿಯಂ $ ಈ ಮುರ್ಬಿಗನಂ $ ಇಲ್ಲಿಯೆ ಬಿಸುಟ್ಟು ಆಂ ಅದಾವ ತಾಣಕೆ ಪೋಪುದು ? ಮುನ್ನಿವನಂ $ ಬಕ್ಕಲಿಕ್ಕುವುದು $ ಕರ್ತವ್ಯಮಲ್ತೆ.

ಧೌಮ್ಯಂ.—ಕುಮಾರಭೀಮಸೇನ ! ಅಂತುಗೆಯ್ವುದು ತಗುಗುಂ $ ಅರನಲ್ತೆ $ ವೀರಕ್ಷತ್ರಿಯರ್ ನಿಮ್ಮನ್ನರ್ಗೆ ದುಷ್ಟಸಂಹಾರಂ.

ಯುಧಿಷ್ಠಿರಂ.—ಅಂತಾದೊಡೆ ಈ ವನಮಧ್ಯಮಂ ಬಳಸ್ವುಗುವಂ.

(ಎಂದೆಲ್ಲರೊಡನೆ ವನಮಧ್ಯಮಂ ಪೊಕ್ಕಂತೆ ಅಭಿನಯಿಸಿ) (ದ್ರೌಪದಿಯಂ ನೋಡಿ).

ಕಂ॥ ಪಾಂಚಾಲರಾಜಪುತ್ರಿ ! ಸು ।
ಖಾಂಚಿತಸುಕುಮಾರಗಾತ್ರಿ ! ನಿನ್ನುಮನಾವೀ ॥
ಸಂಚರಿಸದ ಕಾಂತಾರದೆ ।
ಸಂಚಾರಂಗೊಳಿಪೆವೆಂತು ನೀಂ ಸೈರಿಪೆಯೋ ॥೫೮॥

ದ್ರೌಪದಿ.—ಎನ್ನದೃಷ್ಟಕೆ ನೀವೇಂ ಮಾಡಿದಪಿರ್ ? ಕೈಪಿಡಿದಳ ಸೈಪಿಂದೆಗಡ ಪುರುಷರ ಅಭ್ಯುದಯಮುಂ.

(ತೆರೆಯಲ್ಲಿ ಕಲಕಲಂ)

---

ಕನ್ನೀರ-ರಕ್ತದ, ಕೊಟ್ಟಸಂಗಳ ಬಟ್ಟಲ್—ಸುಟ್ಟಮಾಂಸಗಳರಾಶಿ , ಪಂದಲೆಗಳ ಅಗುಂದಲೆ—ಹಸಿಯತಲೆಗಳ ಆಧಿಕ್ಯ , ಮುರ್ಬಿಗನಂ—ರಾಕ್ಷಸನನ್ನು , ಬಕ್ಕಲಿಕ್ಕುವುದು—ಕೊಲ್ಲುವುದು , ಅರಂ—ಧರ್ಮ ,

ಯುಧಿಷ್ಠಿರಂ —(ಆಲಿಸಿ) ಇದೇಂಗಡಾವಣೆ ?

(ಎಲ್ಲರುಂ ಕಡುಬಂಗೊಳ್ವರ್)

ಯುಧಿಷ್ಠಿರಂ.—(ನೋಡಿ) ಇದಾವುದು ? ಮಹಾಘೋರಮಪ್ಪ ಆಕೃತಿಯೊಂದು ಇತ್ತಲ್ ಎಯ್ತರ್ಕುಂ.

ಧೌಮ್ಯಂ.—(ನೋಡಿ) ಆಃ ಈತನ ಆಕಿರ್ಮೀರನೆಂಬ ಮಹಾರಕ್ಕಸಂ.

ಯುಧಿಷ್ಠಿರಂ —(ನೀಡುಂ ನೋಡಿ) ಅಕ್ಕಟಾ ! ನಿಕ್ಕುವಂ $ ಕೆಕ್ಕಳಿಸುತ್ತುಂ $ ಕೊಕ್ಕರಿಪ ರಕ್ಕಸನ $ ಬೆಕ್ಕಸದ $ ರೂಪು ಲಕ್ಕಿಸಲ್ಕೆ $ ಮೊಕ್ಕಳಂ $ ಕಕ್ಕಸಮಕ್ಕುಂ.

ವೃ॥ ರೂಪಂಗೊಂಡು ತಿರುಂಗಲಾಟಿಸಿ ಮೊದಲ್ ಕಾಳ್ಬಟ್ಟೆಯಲ್ಲೈದಿದಾ । ಮಹಾಪಾಪಂಗಳ ಮೊತ್ತಮೋ ನೆರೆದಮಾವಾಸ್ಯಾನಿಶೀಥಾಳಿಯೋ ॥ ರೂಪಿಂದೊಂದೆಡೆ ಯೆಯ್ದುವೆಲ್ಲ ಖಳರಾ ಹೃದ್ಭಾವಮೋ ಎಂಬಿನಂ । ಕೋಪೋದ್ದೀಪಿತನಪ್ಪ ರಕ್ಕಸನಿವಂ ತಾಂ ಭೋಂಕನೀ ಬಂದಪಂ ॥ ೫೨ ॥

ಧೌಮ್ಯಂ —ಮಹಾರಾಜನೆ ! ಆಂ ಕಿರಿದು ಬೇಗಂ ಈ ಮರದ ಮರೆಯೊಳ್ ನಿಲ್ವಂ.

ಯುಧಿಷ್ಠಿರಂ —ಅಂತಕ್ಕೆ. (ಎಲ್ಲರುಂ ಮರದಪಿಂತೆ ನಿಲ್ವರ್)

(ಬಳಿಕೆ ಪುಗುವಂ ಕಿರ್ಮೀರನೆಂಬ ಮಹಾರಕ್ಕಸಂ)

ಕಿರ್ಮೀರಂ.—ಆಃ ಏನೆಂ ? ಇಂದಿನಿತು ಪೊಳ್ತಾದೊಡಂ ಎನಗೆ ಆರುಂ ದೊರೆತರಿಲ್ಲಕಟಾ! ಪಸಿವು ಎನ್ನಂ ಅಣಿಯರಂ ತಳ್ವೊಯ್ಗುಂ. ಪಸಿವೆಂಬುದು ದುಸ್ಸಹಂಗಡ.

---

ನಿಕ್ಕುವಂ-ದಿಟವಾಗಿ ; ಕೆಕ್ಕಳಿಸುತ್ತುಂ-ಭಯವಿಕಾರವನ್ನುಂಟುಮಾಡುತ್ತ ; ಬೆಕ್ಕಸದ-ಆಶ್ಚರ್ಯದ , ಮೊಕ್ಕಳಂ-ಅಧಿಕವಾಗಿ ೫೨, ಆಟಿಸಿ-ಅಪೇಕ್ಷಿಸಿ

ಕಂ|| ಒಡಲೆಂಬಡವಿಯ ನಡುವೆಡೆ ।
ಯುಡಸಿದ ಪಸಿವೆಂಬ ಕಿಚ್ಚು ತಾಂ ಚುರ್ಚಲೊಡಂ||
ಅಡಿಗಡಿಗೆ ಬೋನವೆಂಬಾ ।
ಕಡುಸರಿಯಿಲ್ಲದೊಡೆ ಶಾಂತಮೇನಾದಪುದೇ || ೫೪ ||

(ಕೋಪದಿಂದ ಬೊಬ್ಬಿರಿದು) ಆಃ ಇಂದುಗಡ ‡ ಪೊಳ್ತಡಂ ‡ ಅದಾವನ ಮೊಗಮಂ ಆಲೋಕಿಸಿದೆನೋ ? ಎಲ್ಲಿಯುಲ್ಲಿ ಪುಡುಕಿದೊಡಂ ಜಂತುವೊಂದುಂ ಕಣ್ಗೆ ಗೋಚರಮೆನಿಸಿತಿಲ್ಲ. ಏಗುವೆಂ ? ( ಸುತ್ತಲ್ ಆಘ್ರಾಣಿಸಿ ಸಂತಸದಿಂದೆ ) ಅರರೆ ! ಇತ್ತಲ್ ಅದೂರದೊಳ್ ಇಂಪಿನ ಮಾನಿಸವಿಂಡಿನ ಕಂಪು ಸೊಂಪಿನಿಂ ಸಮನಿಸಿರ್ಪುಂ. ಇಂದು ಇಸಿವೊಳ್ತು ಆಂ ಉಪವಾಸಿಗನಾಗಿರೆ ಅದಕ್ಕೆ ಅನುಗುಣಮಪ್ಪ ಬಿದ್ದಣಿಸೆ ಲಭಿಸಿದತ್ತು.

ವೃ|| ತ್ವರೆಯಿಂ ಕತ್ತಿದ ನಾಳಿಕೇರದೆ ಜಳಂಬೀರುತ್ತೆ ಬಾಯೂರಿದಂ । ತಿರುಳಂ ತಿಂದು ಬಳಿಕ್ಕೆ ಭೂಮಿಯೊಳದಂ ಬೀಸಾಡುವಾಪಾಂಗಿನಿಂ || ನರರಂ ಭೇದಿಸಿ ಝಲ್ಲೆನುತ್ತೊಸರ್ವ* ಕೆನ್ನೀರಂ ಕರಂ ಪೀರ್ದ್ದನು । ಣ್ಣರುಳಂ ತಿಂದು ಸಿರಂಗಳಂ ಬಿಸಡುವೇ ನಾಸೀಗಳೆತ್ತೆತ್ತಲುಂ || ೫೫ ||

(ಎಂದು ನರ್ತಿಪಂ)

ಭೀಮಂ.—ಆರ್ಯನೆ ! ಇದುವೆಗಡ ಸಮಯಂ ರಕ್ಕಸನ ಮುಂತೆ ನಿಲಲ್. ತಳ್ವದೆ ಮುಂಬರಿವುದು.

(ಎಲ್ಲರುಂ ರಕ್ಕಸನ ಇದಿರೊಳ್ ನಿಲ್ಪರ್)

ಕಿಮ್ಮೀರಂ.—(ನೋಡಿ) (ಸ್ವಗತಂ) ಅಕ್ಕಟಾ ! ಎನಿಬರ ಮಾನಿಸರ. ಇವರೆಲ್ಲರುಂ $ ಮಾಬಗ್ಗಕ್ಕೆ $ ಇದಿರಾದ ಆಕಳಂತೆಯುಂ, ಸಿಂಗನ

---

೫೪. ಚುರ್ಚಲೊಡಂ—ದಹಿಸಲು, ಬೋನಂ—ಅನ್ನ (ಊಟ) ಕಡುಸರಿ—ದೊಡ್ಡ ಮಳೆ, ಪೊಳ್ತಡಂ—ಬೆಳಗೆ, ಮಾಬಗ್ಗಕ್ಕೆ—ಮಹಾವ್ಯಾಘ್ರಕ್ಕೆ ;

ಕಣ್ಗೆವಂದ ‡ಪಲ್ಲಮುರಿಗಳಂತೆಯುಂ‡ ಬಿರುಗಾಳಿಗೆ ಇದಿರ್ವಂದ ಮುಗಿಲ್ಗಳಂತೆಯುಂ ಜಗದ ಮಿೞ್ತುವೆಂದಿನಿಸಿರ್ಪ್ಪ ಎನ್ನ ಇದಿರೊಳ್ ನಿಂದಿರ್ದ್ದಪರ್. (ಪ್ರಕಾಶಂ) ಆಃ ಎಲೆನೀಚರ್ಕ್ಕಳಿರಾ! ಈ ಕಾವ್ಯ ಕವನಕ್ಕೆ ಒಡೆಯನಾಗಿರ್ಪ ಎನ್ನಂ ಲೆಕ್ಕಿಸದೆ ಮಲೆತು ನೀಂ ಅದೆತ್ತಲ್ ತಳರ್ವಿರ್? ನಿಲ್ವುದುನಿಲ್ವುದು. ಈಗಳೆ ನಿಮ್ಮನೆಲ್ಲರಂ ಒಕ್ಕಲಿಕ್ಕುವೆಂ.

ದ್ರೌಪದಿ —(ಕಿಮ್ಮೀರನಂ ನೋಡಿ) ಅಕಟ ಇನ್ನೇಗತಿ? ಪ್ರಾಜ್ಞರೆ! ಆರ್ಯ ಪುತ್ರರಿರ! ಕೈಗಾಯ್ವುದು ಬೆಟ್ಟನೆ ಬೆದರಿಪ ಈರೋಡಗನಂ ನೋಡಲಾರೆಂ ನೋಡಲಾರೆಂ. (ಎಂದು ಕೈಗಳಿಂ ಕಣ್ಗಳಂ ಮುಚ್ಚಿಕೊಳ್ವಳ್)

ಯುಧಿಷ್ಠಿರಾದಿಗಳ್.—(ದ್ರೌಪದಿಗೆ ಮರೆಯಾಗಿ ನಿಲ್ವರ್)

ಧೌಮ್ಯಂ —ದೇವಿ! ಬೆರ್ಚ್ಚಿಬೆದರದಿರ. ದಿವ್ಯಮಂತ್ರದ ಜಪದಿಂ ಇವನ ಉರ್ಕ್ಕಂ ಅಡಂಗಿಪೆಂ. (ಎಂದು ಮಂತ್ರಮಂ ಜಪಿಪಂ)

ಕಿಮ್ಮೀರಂ —‡ಎಲೆ ಬರುಮಾನಿಸ!‡ ನಿನ್ನ ದಿವ್ಯಮಂತ್ರದ ಜಪಂ ಅದಂತಿರ್ಕ್ಕೆ. ಮುಂ ನಿನತ್ತು ಹರಣಮಂ ಉಳಿಸಿಕೊಳ್.

ಯುಧಿಷ್ಠಿರಂ —(ಮುಂತೆಸಾರ್ದು) ಅಯ್ಯಾ! ನೀನಾರ್? ನಿನ್ನ ಪೆಸರೇಂ? ನಿನ್ನ ಬೀಡು ಎತ್ತಲ್? ಎಮ್ಮತ್ತಣಿಂ ನಿನಗೆ ಅಪ್ಪ ಕಜ್ಜಂ ಏಂ? ನಿನಗೆ ಆಂ ಏಂ ‡ಪೊಲ್ಲದಂ‡ ಎಸಗಿರ್ಪೆವು.

ಭೀಮಂ —(ಆತ್ಮಗತಂ) "ಅಯ್ಯಾ! ನೀನಾರ್ ನಿನ್ನ ಪೆಸರೇಂ" ಆಃ ಇವನೊಳ್ ಇನಿತು ಅನುನಯಮಿದೇಕೊ? ಕರ್ವಂ ಕತ್ತರಿಸಿದಂತೆ ನುಡಿಯುವೇಡಾ?

ಕಿಮ್ಮೀರಂ—ಆಂ ಆರೇ? ಬಕಾಸುರನೆಂಬ ಲೋಕೈಕವೀರನಂ ಕೇಳ್ದುದುಂಟೋ?

---

ಪಲ್ಲಮುರಿಗಳ್-ಆನೆಮರಿಗಳು; ಮಲೆತು-ಗರ್ವಪಟ್ಟು

ಬರುಮಾನಿಸ-ನಿಸ್ಸಾರನಾದ ಮನುಷ್ಯನೆ! ಪೊಲ್ಲದಂ-ಕೆಟ್ಟುದನ್ನು,

ಭೀಮಂ.– (ಸ್ವಗತಂ) ಕೇಳ್ದುದುಮುಂಟು, ಕಂಡುದುಮುಂಟು, ಸೀಳ್ದಿಕ್ಕಿದುದುಮುಂಟು.

ಯುಧಿಷ್ಠಿರಂ – ಆತಂಗಂ ನಿನಗಂ $ ನಂಟು $ ಆವುದು?

ಕಿರ್ಮೀರಂ – ಆಂ ಆತನ ಭ್ರಾತರಂ

ಭೀಮಂ – (ಸ್ವಗತಂ) ಆದೊಡೆ ಅವನ ಬಟ್ಟೆಯೆ ನಿನಗಂ.

ಕಿರ್ಮೀರಂ – ಇತ್ತಲ್ ಸಿಲ್ಕಿದವರಂ ಬಿಡದೆ ಭಂಜಿಸಿ ಬುಂಜಿಸುತ್ತೆ ಆನಂದದಿಂ ಈ ಕಾಮ್ಯಕಾಟವಿಗೆ ಅಧೀಶಂ ಆಗಿರ್ದಪೆಂ. ಈಗಳ್ ಎನ್ನ $ ಜೇವಣದ $ ರೂಪದಿಂ ನಡೆತಂದ ನೀಂಗಳ್ ಆರ್? ಪೇಳಿಂ ಇದೆಕೊಳ್ಳಿಂ ಇಲ್ಲಿಯೆ ನಿಮ್ಮನೆಲ್ಲರಂ ಕೊಂದು ತಿಂದು ತೇಗಿ ತಣಿದಪೆಂ.

ಭೂಸುರರ್.– ಅಕಟ! ಎಮಗೆ ಇನ್ನೇಗತಿ? (ಎಂದೋಡುವರ್)

ಭೀಮಂ –(ಜನಾಂತಿಕಂ) ಭೂಸುರರಿರ! ನೀಂ ಅದೇತಕ್ಕೆ ಇಂತು ನಡುಕಂಗೊಂಡು ಪಲಾಯನಂಗೆಯ್ವಿರ್? ಮುನ್ ಇವನ ಅಣ್ಣನುಂ ಇಂತೆ $ ಜರುಚು $ ತಿರ್ದಂ.

ಕಿರ್ಮೀರಂ – ನೀವಾರ್ಗೆ? ಭೋಂಕನೆ ಬಿನಯದಿಂ ಬಿನ್ನವಿಸಿಂ.

ಭೀಮಂ – (ಸ್ವಗತಂ) ಎಲೆ ಪಲ್ಗಲಿತ! ಆವೆ ನಿನಗೆ ಬಿನಯದಿಂ ಬಿನ್ನವಿಪರ್? ಎಮ್ಮ ಎಡಗಾಲುಂಗುಟಕಂ ದೊರೆವಾರದ ನಿನಗೆ ಇನಿತು ಬಿಂಕವೋ? ಮೋಣ್ ಮನಂ ಬಂದಂತೆ ಜರುಚು. ಇರ್ಕೆ ಅರೆ ನಿಮಿಸವಲ್ತೆ ನಿನ್ನ $ ಹದಿವೆ?

ಯುಧಿಷ್ಠಿರಂ.–ಅಯ್ಯೊ! ಎನ್ನಂ ಯುಧಿಷ್ಠಿರನೆಂದಪರ್. ಈ ಭೀಮಸೇನಾದಿಗಳ್ ಎನ್ನ ಒಡವುಟ್ಟಿದರ್. ಆವೆಲ್ಲರುಂ ದಾಯಾದರಿಂ ಪರಾಜಿತರಾಗಿ ಕಾಡಿಂಗೆ ಬಂದಿರ್ಪೆವು.

---

ನಂಟು–ಸಂಬಂಧವು, ಜೇವಣದ-ಆಹಾರದ, ಜರುಚು-ವ್ಯರ್ಥಾಲಾಪ, ಹದಿಬೆ-ಪ್ರತಿಷ್ಠೆ.

ಭೀಮಂ.-(ಆತ್ಮಗತಂ) ಈದುರುದುಂಬಿಯೊಳಂ ಕುಲನಾಮಂಗಳಂ ಅರಿಪುತೆ ಎನ್ನುಮ್ಮದುಗುಡನುಂಪೇಳ್ವ ಈತೆರನಂ ಏನೆಂಬೆಂ.

ಕಿಮ್ಮೀರಂ.-ಅಪ್ಪೊಡೆ ನೀಂ ದೈವಯೋಗದಿನೆ ಎನ್ನ ಕಣ್ಗೆ ವಂದಿರ. ಪಲವುಂದಿನಂಗಳಿಂ ಆಂ ಈಭೀಮಸೇನನಂ ತೆಕ್ಕನೆ ತಿಕ್ಕಿ ತೆಕ್ಕಯಾಡಿ ಇವನ ಬಡಲ ಸುಂಟಿಗೆಯಂ ಮನವಾರೆ ತಿನಲ್ ಎಳಸಿದ್ದೆಂ.

ಭೀಮಂ.-ಭಳಿರೆ ರಕ್ಕಸ ಭಳಿರೆ! ನಿನಗೆ ಅನಿತು ಬಲ್ಮೆ? ನಿನ್ನ ವೀರಾಳಾಪಕೆ ಸಂತಸಂಬಡುವೆಂ.

ಕಿಮ್ಮೀರಂ.-(ಭೀಮನಂ ನೋಡಿ) ಎಲೆ ನೀಂ ಚಭೀಮಸೇನ! ಅದೇತಕ್ಕೆ ಇಂತು ಎನ್ನ ಕಣ್ಗೆ ನಾಡೆ ಗೋಚರನಾಗದೆ ಪಿಂತೆಸಿಲ್ದು ರಿಕ್ಕಟಂ ಆಳೋಚಿಸುತಿಪ್ಪೆ? ಎನ್ನೊಡನೆ ಯುದ್ಧವೆಸಗಲ್ ಸಿದ್ಧನಾಗು. ಉದ್ಧತನಪ್ಪ ನಿನ್ನಂ ಈಗಳೇ ಬದ್ಧವೈರದಿಂ ಕರುತ್ತಿರಿದು ಶ್ರಾದ್ಧದೇವನ ಎಡೆಗೆ ಕಳಪಿ ರಾಕ್ಷಸಕುಲಕೆ ಉದ್ಧವವಂ ವರ್ಧಿಪ್ಪೆಂ.

ಭೀಮಂ.-(ಮುನಿಸಿನಿಂ ಮುಂಸಾರ್ದು) ಚೀ ಎಲೆ ದುರುಳರಕ್ಕಸ! ನಿನ್ನ ಜಂಕಣೆಗೆ ಭೀಮಂ ಬೆಚ್ಚಿ ಬೆಬ್ಬಳಂಬೋಪನೇ? ಮತ್ತಗಜೇಂದ್ರನಂ ಬೆದರಿಪೆನೆಂದು ಪುಚ್ಚುಗೊಂಡಕುಕ್ಕುರಂ ಗೊಂಕಯಂ ಮೋಗಣ್ಗೆ ಎತ್ತಿ ಬರಿದೆ ಬಗುಳ್ವಂತೆ ನೀಂ ಇಂತು ಅದೇಕೆ ಉಗಿಬಗಿಯಾಗಿ ಕೆರಳ್ದು ಬಗುಳ್ದಪೆ? ಪಲ್ಲುಮುರಿ ಚೆಲ್ಲದಿಂ ಆರವೆ ವೊಕ್ಕು ರಂಭವಂ ಮುರಿವಂತೆ ನಿನ್ನ ಬಳೆದ ತೊಡೆಗಳಂ ಚಟಕ್ಕನೆ ಈಗಳ್ ಮುರಿದಪೆಂ.

ಕಿಮ್ಮೀರಂ.-ಎಲೆ ಮಾನುಷಾಧಮ! ಆಃ ಎನ್ನ ಸಹೋದರನಪ್ಪ ಬಕಾಸುರನಂ ಸದೆದು ಎನ್ನ ಪರಮಮಿತ್ರನಪ್ಪ ಹಿಡಿಂಬನಂ ಇಕ್ಕಿ ಆತನ ಸೋದರಿಯಪ್ಪ ಹಿಡಿಂಬಿಯಂ ಬಂದಿಕೊಂಡು ಉಯ್ದವಂ ನೀನೆ ಅಲ್ತೆ?

---

ಸುಂಟಿಗೆ-ಮಾಂಸ, ರಿಕ್ಕಟಂ-ವ್ಯರ್ಥವಾಗಿ, ಉದ್ಧವ-ಉತ್ಸವ, ಗೊಂಕೆ-ಕತ್ತು, ಚೆಲ್ಲದಿಂ-ವಿಲಾಸದಿಂದ, ಆರವೆ ಆರಾಮ, (ಉದ್ಯಾನ)

ಭೀಮಂ -ಆವಿಷಯದೊಳ್ ಶಂಕೆಯೇಕೆ? ಎನ್ನಂ ಅಂತು ಬಿನ್ನಣದ $ ಬಂಡಣದ $ ಬಿತ್ತಗನೆಂದು ನೀಂ ಅರಿತಿರ್ದೊಡಂ ಮಗುಳ್ದು ಬರಿದೆ ಎನ್ನಂ ಕೆಣಕಿ ಅದೇತಕ್ಕೆ $ ಜವಹುರಕ್ಕೆ $ ಪಯಣಂ ಪೋಪೈ ?

ಕಿಮ್ಮೀರಂ -ಎಲೆ ಮೋಸಕಾರ ! ಅಂದು ನೀಂ ಅವರಂ ಅದೇನುಪಾಯದಿಂ ಕೊಂದೆಯೋ ? ನಿನ್ನ ಗಸಣಿಯ ಗರುವಾಯ ನುಡಿಗಳ್ ಅಂತಿರ್ಕೆ. ನಿನ್ನಂ ಅದಾರ್ ಬಂಡಣದ ಬಿತ್ತಗನೆಂದಪರ್ ? ಮುಂ ಯುದ್ಧಸನ್ನದ್ಧನಾಗು. ಎನ್ನ $ ಬರ್ದುಂ $ ನೀನೆ ಕಾಣ್ಬೆ. ( ಎಂದು ಪಲ್ಮೊರೆವಂ )

ಭೀಮಂ.-ಛೀ! ಬಡಿವಾರದ ರಕ್ಕಸ ! ಏಕೆ ಇಂತು ನಿಬ್ಬರದಿಂ ಬೊಬ್ಬಿರಿವೆ ? ಏಕೆ ಇಂತು $ ಔಡುಗರ್ಚಿ $ ಕಿಸುಗಣ್ಬಿನೋಳ್ಪೆ ? " ಕರಡಿಗೆ ಅಂಜದವಂ ಕರಿಯ ಕಂಬಳಿಗೆ ಅಂಜುವನೇ? " ಎಂಬಂತೆ ಎಂತಪ್ಪರ್ಗಂ ಅಂಜದ ಭೀಮಂ ನಿನಗೆ ಅಂಜುವನೇ ? ನಿನ್ನೊಡನೆ ಯುದ್ಧಕ್ಕೆ ಇನ್ನದೇಂ ಸನ್ನಣಂ. ನಿನ್ನ ಮಾತಿನಂತೆಯೆ ನಿನ್ನ ಬರ್ದು ಈಗಳ್ ಕಾಣ್ಗುಂ.

ಅರ್ಜುನಂ -ಆರ್ಯನೇ ! ಆನುಂ ನಿನಗೆ ಇನಿತು ನೆರವಾಗಿ ಬಂದಪೆಂ.

ಭೀಮಂ —(ನಕ್ಕು) ವತ್ಸ !

ಕಂ॥ ನಿಶಿಚರನೀಚನನಿವನಂ ।
ವಿಶಸನವೆಸಗಲ್ಕೆ ನೆರವದೇಕೆ ನಿನತ್ತುಂ ॥
ಮಶಕಮನೊಂದಂ ಪೊಯ್ಯ ।
ಲ್ಕಶನಿಯ ಸಾಹಾಯ್ಯಮಾರ್ಗಮೇನೊಪ್ಪುಗುಮೋ॥೫೬॥

ಕಿಮ್ಮೀರಂ.-$ ಎಲವೊ ಪುಗ್ಗಯ್ಲನೆ ! $ ಎನ್ನಂ ಮಶಕಂಗೆತ್ತು ಮನಂಬಂದಂತೆ ನುಡಿವೆಯೋ ? ನಿನಗಾಂ ಮಶಕಪ್ರಾಯನಾದೆನೊ ?

---

ಬಂಡಣ-ಕಾಳಗ, ಜವಹುರ-ಯಮಪುರ, ಬರ್ದು-ಪ್ರೌಢಿ ಮತ್ತು ಮರಣ, ಔಡು-ತುಟಿ ಪುಗ್ಗಯ್ಲ--ಗರ್ವಿತ,

ನಿನಗೆ ಇಂತುಟು ‡ಕಾಮುಕರಂ ?‡ ನಿನ್ನಂ ಈಗಳ್ ಕೊಂದು ತಿಂದು ತೇಗಿ ತಣಿವಂ ಬಂದದಿರ್ದೊಡೆ ಆಂ ಅದೊರ್ವಚೆನ್ನಪೊಂಗನೇ ?

ಭೀಮಂ.—ಚೀಃ ಚೀಃ ಪಂದೆ ! ನಿನ್ನಂ ಚೆನ್ನಪೊಂಗನೆಂಬ ಎಗ್ಗನ ದಾವಂ ? ಸಿಕೆ ‡ಜಕ್ಕಂದೊಳಲಿಯುಂತೆ‡ ಮಿಕ್ಕು ನೀಂ ಅರಚುವೆ ?

ಕಿಮ್ಮೀರಂ.—ಮೊನೆಯೊಳ್ ಎನ್ನ ಅದಟಂ ಈಗಳ್ ತೋರಿ ಜವನ ಜಕ್ಕಂದೊಳಲಿಯುಂ ನಿನಗೆ ಬಯ್ಯನೆ ತೋರಿಪೆಂ. ಇತ್ತಲ್ ಕೊಳುಗುಳಕೆ ತಾಣಂ ಮರಗಳ ಸಂದಣಿಯಿಂ ಕಿರಿದಾಗಿರ್ಕುಂ. ಅದರಿಂ ಆಪೆರ್ವಯಲ್ಗೆ ಪೋಪಂ.

ಭೀಮಂ.—ನಿನ್ನ ‡ವೆಗ್ಗಳದ‡ ಕೊಳುಗೊಳಕ್ಕೆ ತಾಣಮಿದು ಸಾಲದೊ ? ಬಳ್ಳಿತು ನಿನ್ನ ಬಯಕೆಯುಂತಕ್ಕೆ, ನಡೆ.

ನಕುಲಂ.—ಆರ್ಯ ! ಇವಂ ಎತ್ತಲೊ ‡ಪನಕೆ‡ ಕೊಂಡುಯ್ದಪನೆಂದೆಣಿಸಿದಪೆಂ.

ಭೀಮಂ.—ವತ್ಸ ! ಅಕ್ಕೆ ಎಮಗೆ ತಳ್ಳಂಕವೇಂ ?

ಧೌಮ್ಯಂ.—(ಜನಾಂತಿಕಂ) ಕುಮಾರ ಭೀಮಸೇನ ! ಮುಚ್ಚಂಜೆಯಾಗುತೆ ಬಂದುದು. ಇಂ ರಕ್ಕಸರ ಬಲ್ಪು ದಳವೇರುವುದು. ಅನಿತರೊಳ್ ಬವರಂಗೆಯ್ವುದು ತಗುಗುಂ.

ಭೀಮಂ—ಪೂಜ್ಯರೆ ! ಇವನಂ ಬಕ್ಕಲಿಕ್ಕುವುದು ಎನಿತರೊಳ್ ಇರ್ಕುಂ. ಇವನ ‡ಅವತೆ‡ ಇಲ್ಲಿಗೆ ತೀರಿತೆಂದೆ ಬಗೆವುದು.

ಧೌಮ್ಯಂ.—ದಲ್. ಪರಮೇಶ್ವರಾನುಗ್ರಹಕೆ ಪಾತ್ರರಾದ ನಿಮಗೆ ವಿಜಯಶ್ರೀ ಕರಗತಮಾಗಿಯೆ ಇರ್ಕುಂ.

(ಎಂದೆಲ್ಲರುಂ ತೆರಳ್ದರ್)

ಇಂತಿದು ಪ್ರಥಮಾಂಕಂ.

---

‡ ಕಾಮುಕರಂ--ಗರ್ವ, ಚೆನ್ನಪೊಂಗಂ-- ವೀರಂ, ಜಕ್ಕಂದೊಳಲಿ-- ಕೋಣ, ಪೆರ್ವಯಲ್--ದೊಡ್ಡಬಯಲು, ವೆಗ್ಗಳದ--ಅತಿಶಯದ, ಪನಕೆ--ಸಂಕೇತಸ್ಥಾನಕ್ಕೆ, ಅವತೆ--ಅವಸ್ಥೆ.

# ದ್ವಿತೀಯಾಂಕಂ.

( ಬಳಿಕ ದಾರಿಗನಪ್ಪ ನಾರದಂ ಪುಗುವಂ )

ನಾರದಂ.—

ವೃ ॥ ಘನವಾದೀಶನ ಚಿತ್ತದೊಳ್ ನೆಲಸುವಾ ಭಾವಂಗಳೇ ಬೇರೆಯಾ । ತನ ಗೆಯ್ತಂಗಳೆ ಬೇರೆಯಾತನ ಕೃಪಾಸಂಪತ್ತಿಯೇ ಬೇರೆಯಾ ॥ ತನ ಗಾಂಭೀರ್ಯಮೆ ಬೇರೆಯಾತನ ಚಮತ್ಕಾರಂಗಳೇ ಬೇರೆಯಾ । ತನ ಲೋಕೋತ್ತರವಪ್ಪ ಮೈಮೆಸಿರಿಯಾರ್ಗಂ ಭಾವಿಸಲ್ ಬರ್ಕುಮೇ ॥ ೫೭ ॥

ಶ್ರೀಹರಿಹರಾದಿನಾಮಂಗಳಂ ನೆಗಳ್ತೆವಡೆದ ಸರ್ವಚೈತನ್ಯಸ್ವರೂಪನಪ್ಪ ಪರಶಿವನ ಪರಿಪರಿಯ ಗುಣಪಾರಂಪರಿಯಂ ನೆನೆನೆನೆವ ಎನ್ನ ಮನಂ ಇಂದು ಅಮಂದಾನಂದತುಂದಿಲಮೆಂದೆನಿಸಿರ್ಕುಂ. ಅಂತಲ್ತೆ— ಜಗದ್ದ್ರೋಹಿಗಳಂ ಪಲರಂ ಖಲರಂ ಲೀಲಾಮಾತ್ರದಿಂ ಗೆಲ್ದ $ ಮಾದೇವಂಗೆ $ ಸಕಲಲೋಕಮುಂ ಸಂಕಲ್ಪಮಾತ್ರದಿಂ ಸ್ವಾಧೀನವಾಗಿರ್ದಪುದು. $ ನನ್ನಿಯುಂ $ ನಲ್ನಡೆವಳಿಯುಂ ಭೂತಂಗಳೊಳ್ ದಯೆಯುಂ $ ಕಾಳ್ಗೆಯ್ತದತ್ತಣಿಂ ಬಿಗುರ್ಪುಂ $ ತಗದ ಕಜ್ಜಂಗಳೊಳ್ $ ನಾಣುಂ $ ತರ್ಕ ವಿಚಾರದೊಳ್ ಜಾಣುಂ ಆರೊಳಿರ್ಕುಮೋ ಅವಂದಿರ ಎಡೆಯೊಳ್ ಪರತರಮೂರ್ತಿ ಅದಾವಗಂ ನಲ್ದು ನರ್ತಿಸುತಿರ್ದಪಂ. ಜಗವಿದೆಲ್ಲಮುಮಸಾರಂ; ಸಾರಭೂತಂ ಆ ಪರಶಿವಂ ಒರ್ವನೆ. ಆತಂ ಎಳ್ಳನಿತು ಕನಲ್ದೊಡಂ ಜಗವೆಲ್ಲಂ $ ಸೀಕರಿಪೋಗುಂ $ ಈ ಜಗವೆಲ್ಲಂ ಆತಂಗೆ ಏನುಮಂ ಗೆಯಲ್ $ ಆರ್ತದಿಲ್ಲಂ $ ಪಗಲಿರುಳೆಂಬ ಕಾಲಚಕ್ರಮಂ ತನ್ನ ಮೈಮೆಯಿಂ ತಿರುಂಗಿಸುತೆ

---

ಮಾದೇವಂ—ಮಹಾದೇವ ಮತ್ತು ಲಕ್ಷ್ಮೀಪತಿ, ನನ್ನಿ—ಸತ್ಯ, ಕಾಳ್ಗೆಯ್ತ—ನೀಚಕಾರ್ಯ; ಬಗುರ್ಪು—ಭಯ; ನಾಣುಂ—ಲಜ್ಜೆಯೂ; ಸೀಕರಿಪೋಗುಂ—ಸೀದು ಸೀಕಲಾಗುವುದು, ಆರ್ತದಿಲ್ಲಂ—ಶಕ್ತವಾಗಿಲ್ಲ,

ಪ್ರಪಂಚದ $ ಪುಟ್ಟುೞಿವೞಿವುಗಳ್ಗೆ $ ಕಾರಣಭೂತನಾಗಿರ್ದ್ದಪಂ. ಇಂತಪ್ಪ ಮಹಾಮಹಿಮನಾದೊಡಂ ತಿರೆಯ $ ತಿಣ್ಣಮಂ $ ತವಿಸಲ್ಕೆಂದು ಅದೊಂದು ಲೀಲಾಮಾನುಷಾವತಾರಮಂ ಕೊಂಡು ಶ್ರೀಕೃಷ್ಣನೆಂಬ ಮಂಗಳನಾಮಮಂ ಕೈಕೊಂಡು ಪ್ರಾಕೃತಪುರುಷನಂತೆ ಕೊಂಡುಕೊನೆಯುತ್ತುಂ ತನ್ನ ಭಾವುಕರಂ ನಲ್ಮೆಯಿಂ ಪೊರೆಯುತಿರ್ದ್ದಪಂ. $ ಪೞಿಪೊರ್ದ್ದದ $ ಪಾಂಡವರ್ ಜೂಜಿನೊಳ್ ಪರಾಜಿತರಾಗಿ ಪೇರಡವಿಯಂ ಪುಗುವುದುಂ ಏಗತಿಯವರ್ಗೆಂದು ಗನಹರೆಲ್ಲರ ಬೇಗುದಿಗೊಳುತಿರ್ಪರ್. ಪುಣ್ಯಶ್ಲೋಕರವರ್ ಅಡವಿಯೊಳ್ ಭೂಸುರವಿಸರಂಬೆರಸು ದಳವೇರಿದ $ ಪೇರುಚ್ಚವದಿಂ $ ನಣ್ಪುವಡುತುಮೆ ಇರ್ದ್ದಪರ್-ಎಂದು ಆಂವಿಡನುರಿವೆಂ. ಪರಮೇಶ್ವರಂ ತನ್ನ ನಲ್ಮೆಯ ಭವ್ಯರಪ್ಪ ಪಾಂಡವರ್ಗೆ ಪರಮಾಭ್ಯುದಯಸಂಪದಮಂ ಅನುಗ್ರಹಿಸವೇೞ್ಕುಮೆಂಬ $ ನಲ್ವಗೆಯಿಂದಮೆ $ ಈಗಳಲ್ಲದ ಕೋಟಲೆಯಂ ಬದವಿಸಿಪ್ಪರ್ಗಂ. ಪೇರೆಡರೆಂಬ ಬಿರುವಿಸಿಲ್ ಸೋಂಕದಂತೆ ತನ್ನ ಅದೊಂದಳ್ತಿಯೆಂಬ ಬಿತ್ತರದ ಸತ್ತಿಗೆಯಂ ಬಿತ್ತರಿಸಿ ಲೋಕೋತ್ತರರೀತಿಯಿಂ ಭವ್ಯರಂ ಪೊರೆವ ಮಾಮಹಿಮನಪ್ಪ ಜಗನ್ಮಂಗಳಮೂರ್ತಿಯ ಗೆಯ್ತಂಗಳ್ ಆರ್ಗಮಗೋಚರಂ, ಮೇಣ್ ಅಸಾಧಾರಣಂ. ಆಶ್ರಿತಜನಪರಿಪಾಲನನಿಸ್ತಂದ್ರನುಂ ಸುಗುಣಸಾಂದ್ರನುಂ ಆದ ಉದಾರಮಹೇಂದ್ರಂ ಮಹೋದಾರವಪ್ಪ ತನತ್ತು ಕರುಣಾಕಟಾಕ್ಷವೀಕ್ಷಣದಿಂ ಅವಂದಿರಂ ಅದೆಲ್ಲಿಯುಂ ಅದೆಂತುಂ ಪರಿಪೋಷಿಸಿದಪಂ. ಆಂ ಕೆಲದಿನಂಗಳೊಳೆ ನೆಲನನೆಲ್ಲಂ ಸುತ್ತಿಕೊಂಡು ಇತ್ತಲ್ ಹಸ್ತಿನಾವತಿಯಂ ಬಳಸಾರ್ವುದುಂ ಪುಣ್ಯಶ್ಲೋಕರ್ ಪಾಂಡವರ ನೆನೆಪು ಎನಗೆ ಇಂದು ಬಂದುದು. ( ಇನಿತುದೂರಂ ಸಾರ್ದು ) ಇದಾರಿತ್ತಲ್ ಕಳ್ಳನೆ ಬರುತಿರ್ಪ್ಪಮಾಪುರುಷಂ? ಈತಂ ನೋೞ್ಪೊಡೆ ಅಱಿವುಳ್ಳ ಪರಮಭಾಗವತನಂತೆ ಗಡ ತೋರುಗುಂ. ಒೞ್ಳಿತು ಆರಯ್ದಪೆಂ (ನಾಡೆ ನೋಡಿ) ಅರರೆ! ಸುಚರಿತಸುಂದರಂ ಭಗವದ್ಭಕ್ತಿಮೇದುರಂ ದುರಿತವಿದೂರಂ ವಿದುರಂ.

---

ಪುಟ್ಟುೞಿವಳವುಗಳ್ಗೆ-ಜನ್ಮಸ್ಥಿತಿನಾಶಗಳಿಗೆ, ತಿಣ್ಣಮಂ-ಭಾರವನ್ನು; ಪೞಿ-ನಿಂದೆ; ಪೇರುಚ್ಚವದಿಂ-ಮಹೋತ್ಸವದಿಂದ; ನಲ್ವಗೆ-ಒಳ್ಳೆಯಅಭಿಪ್ರಾಯ.

( ಬಳಿಕ ವಿದುರಂ ಪುಗುವಂ )

ವಿದುರಂ.—(ನಾರದನಂ ದೂರದೆ ನೋಡಿ) ಇವರಾರ್ ? ನಿಗ್ಗವಂಬೊಲ್ $ ಬೆಳ್ಪೊಗರ $ ನಾಂತ ಮೆಯ್ಯವರ್. (ಬಗೆದು) (ಆತ್ಮಗತಂ) ಆಃ ನಿಸರ್ಗ ನಿಜಪ್ರಭಾವಿಜಿತಶಾರದನೀರದರ್ ವಿಶ್ವವಿಚಾರವಿಶಾರದರ್ $ ನೇರಿದರ್ $ ನಾರದರ್. ಇದೆಂತು ಗಡ ಎನಗೆ ಇದಿರ್ ದಿಟ್ಟಿವಟ್ಟೆಯನೇರಿದರ್ ?

ನಾರದಂ.—ಎಲೆ ವಿದುರನೆ ! ನಿನಗೆ ಮಂಗಳಮಕ್ಕೆಮ. ಅದೆಲ್ಲಿಂ ಬರುತಿರ್ದಪೈ ?

ವಿದುರಂ.—ಕಾಮ್ಯಕವನದತ್ತಣಿಂ ಬಂದೆಂ. ಅತ್ತಲ್ ಪಾಂಡವರಂ ನೋಡಿಕೊಂಡು ಹಸ್ತಿನಾವತಿಗೆ ಪೋಗುತಿರ್ದಪೆಂ. ಇತ್ತಲ್ ಇಂದು ಪೂಜ್ಯರ ದರ್ಶನದಿಂದೆ ಧನ್ಯನಾದೆಂ.

ನಾರದಂ.—ವಿದುರನೆ ! ಅದೇಂ ನೀಂ ಕಾಮ್ಯಕವನಕೆ ಪೋಗಿ ಬಂದುದು ?

ವಿದುರಂ.—ಪೂಜ್ಯರೆ ! ಆಲಿಪುದು. ಪಾಂಡವರ್ ಬನಮಂ ಪುಗುವುದುಂ ಅದೊಂದು ದಿನಂ ಆರ್ಯಧೃತರಾಷ್ಟ್ರಂ ಎನ್ನಂ ಬರವೇಳ್ದು ಇಂತು ಬೆಸಗೊಂಡಂ.

ನಾರದಂ.—ಅದೆಂತು ?

ವಿದುರಂ.—" ವತ್ಸವಿದುರ ! ನಾಡಿಗರೆಮ್ಮೊಳದೆಂತು ನಲ್ಮೆವಡೆದಿರ್ದಪರ್ ? ಅದೆಂತು ರಾಜ್ಯಂ ಎಮ್ಮ ಬಸದೊಳ್ ನೆಲೆಗೊಳ್ಗುಂ. ಈವಿಷಯದೊಳ್ ಆವೇಂಮಾಳ್ಪುದು ? " ಎಂದು.

ನಾರದಂ.—ಅದಕ್ಕೆ ನೀನೇಂ ಮರುನುಡಿಯಂ ನುಡಿದೈ ?

ವಿದುರಂ.—ಅದಕ್ಕೆ ಆಂ ನುಡಿದುದು ಇಂತು —" ದುಶ್ಚರಿತರಪ್ಪ ನಿನ್ನ ಮಕ್ಕಳಂ ಉಳಿದು ಸುಚರಿತರಂ ಪಾಂಡವರಂ ಕರೆಯಿಸಿ ಅವರಂ ಇಲ್ಲಿ ನೆಲೆಗೊಳಿಪೊಡೆ ರಾಜ್ಯಂ ಸುಸ್ಥಿರವೆನೆ ನಿಲ್ಗುಂ. ನಾಡಿಗರ್ ಕಿರುನುಡಿಯನಾಡದೆ ನಾಡೆ ಬಲ್ಗುಂ " ಎಂದು.

---

ಬೆಳ್ಪೊಗರಂ--ಬಿಳಿಯ ಕಾಂತಿಯನ್ನು , ನೇರಿದರ್ -ಋಜುಸ್ವಭಾವವುಳ್ಳವರು ,

ನಾರದಂ.–ನಿನ್ನನ್ನರ್ ನೀತಿಸಂಪನ್ನರ್ ನುಡಿಯುವೇಳ್ಪ ನುಡಿಯಿ ಮ. ಬಳಿಕೆ ಬಳಿಕೆ ? ?

ವಿದುರಂ.–ಬಳಿಕೆ ಎನ್ನ ನುಡಿಯಂ ಆರ್ಯಂ ಆಲಿಸಿ ಸಿಡಿಮಿಡಿಗೊಂಡು " ಛೀ ನಡೆ ನೀಂ ಪಾಂಡವಪಕ್ಷಪಾತಿ. ಎನಗೆ ಬಳ್ಳಿತಂ ಬಯಸುವಾತನಲ್ತು " ಎಂದು ಗದರಿ ಗರ್ಜಿಸಿದಂ.

ನಾರದಂ.–ವಿದುರಾ ! ನೀನೊರ್ವನೆ ಪಾಂಡವಪಕ್ಷಪಾತಿಯಲ್ತು ; ಮೂಲೋಕದೊಳಿರ್ಪ ಸಂತರೆಲ್ಲರುಂ. $ ನೆರೆವೆರೆಯ $ ತಣ್ಣದಿರ್ಗಳೊಳ್ ಆರ್ಗೆ ಪಕ್ಷಪಾತವಿಲ್ಲಂ ? " ಕಂಡುದಂಪೇಳ್ದೊಡೆ ಕೆಂಡದಂತಪ್ಪ ಕೋಪಂ " ಎಂಬಂತೆ ಸಿನತು ಹಿತವಪ್ಪ ನುಡಿಯುಂ ಧೃತರಾಷ್ಟ್ರಂಗೆ ರುಚಿಸದೆ ಕೋಪವಂ ಬರಿಸಿದುದು ದೈವಗತಿ ಗಡ ? ವಿಧಿಹತಂಗೆ ಅಮದುರ್ನಂಬಿಸವೆನಿಸುಗುಂ. ಆಯ್ತು. ಬಳಿಕ ನೀನೇಂ ಮಾಡಿದೈ ?

ವಿದುರಂ.–ಬಳಿಕ್ಕೆ ಆಂ ಇತ್ತಲಿರ್ಪುದು ತಗದೆಂದರಿತು ಆಚಣದೊಳ್ ಅಲ್ಲಿಂ ಪೊರಮಟ್ಟು ಪಾಂಡವರಿರ್ಪೆಡೆಯಂ ಸಾರ್ದೆಂ.

ನಾರದಂ–ಸಾಧು ವಿದುರ ಸಾಧು. ಬಳ್ಳಿತನೆ ಗೆಯ್ದೈ. ಬಳಿಕ ಮತ್ತಲ್ ?

ವಿದುರಂ.–ಅತ್ತಲ್ ಪಾಂಡವರ್ ಎನ್ನಂ ಕಂಡು ಅಳ್ತಿಯಿಂ ಉಪಚರಿಸಿದರ್.

ನಾರದಂ.–ತಕ್ಕುದಿದುವುಂ. ಬಳಿಕ್ಕಂ ?

ವಿದುರಂ.–ಬಳಿಕ್ಕವೋ ? ಯುಧಿಷ್ಠಿರಂಗೆ ನುಡಿಯುವೇಳ್ಪ ನಲ್ನುಡಿಗಳಂ ನುಡಿದು ಕೆಲದಿನಂ ಅಲ್ಲಿಯೆ ಸಂತಸದಿಂ ಇರ್ದೆಂ.

ನಾರದಂ.–ಬಳಯುಂ ?

ವಿದುರಂ–ಬಳಿಯುಂ ಆರ್ಯಧೃತರಾಷ್ಟ್ರಂ ಬಗೆಯೊಳ್ ವಿಚಾರಂಗೊಂಡು ಕುದಿಕುದಿದು, ಎನ್ನಂ ಅಗಲ್ದು ಇರಲೊಲ್ಲದೆ ಎಂತಾನುಂ

---

ನೆರೆವೆರೆಯ--ಪೂರ್ಣಚಂದ್ರನ.

ಕರೆದುತಾರೆಂದು ಸಂಜಯನಂ ಅಟ್ಟಿದಂ. ಅವಂ ಎನ್ನಂ ಸಾರ್ದ್ದು ಪಲತೆರದೆ ಬೇಳ್ಪುದುಂ ಮರುಕದಿಂ ಆಂ ಮನದೆ $ಏಗೊಂಡು$ ಪಾಂಡವರಂ ಎಂತುಂ ಬೀಳ್ಕೊಂಡು ಆರ್ಯನ ಎಡೆಗೆ ನಡೆಗೊಂಡಪೆಂ.

ನಾರದಂ.-ನಿನ್ನ $ತಕ್ಕಾರ್ಮೆಗೆ$ ಇದು ತಕ್ಕುದು. ಪಾಂಡವರ ಸಂಗತಿಯೇಂ ಪೇಳ್. ಅವರ್ ಪದುಳಮಿರ್ಪ್ಪರೇ?

ವಿದುರಂ-ಪೂಜ್ಯರೆ! ಸರ್ವಜ್ಞರ್ ತಮಗೆ ಆಂ ಬಿನ್ನವಿಪ್ಪುದು ಏನಿರ್ಕ್ಕುಂ? ಆದೊಡಂ ಪೂಜ್ಯರ್ ಬೆಸಸುವುದರಿಂ ಅರಿತುದಂ ಅರಿಕೆಗೆಯ್ವೆಂ. ಸುವೃತ್ತರ್ ಕಾರಡವಿಯೊಳಂ ನಿಶ್ಚಿಂತರಾಗಿ ಪದುಳಮಿರ್ಪ್ಪರ್. ಭಗವದ್ಭಾಸ್ಕರನ ಹಸಾದದಿಂ ಅದೊಂದು ಅಕ್ಷಯಪಾತ್ರೆಯುಂ ಪಡೆದು ತರತರದ ನಲ್ಲುಣಿಸಿನಿಂ ಭೂಸುರರಂ ತಣಿಪಿ ತಾವುಂ ತಣಿಗುಂ.

ನಾರದಂ- ಆಂ ಬಗೆದಂತೆಯೆ ನುಡಿದಪೈ.

ವಿದುರಂ-ಪೂಜ್ಯರ ಬಗೆ ಬೇರೆಯಪ್ಪುದೆ?

ನಾರದಂ.-ಈಗಳ್ ಅವರ್ ಎಲ್ಲಿರ್ದ್ದಪರ್?

ವಿದುರಂ ಕಿಮ್ಮೀರಸಂಹಾರದಿಂ ನಿಶ್ಚಿಂತರಾದ $ಮಾತವಸಿಗಳ$ ಪರಕೆಗಳಂ ಕೈಕೊಳುತೆ ಪರಮೇಶ್ವರನಂ ಪರಮಭಕ್ತಿಯಿಂ ಆರಾಧಿಸುತುಂ ಕಾಮ್ಯಕವನದೊಳ್ ಪರಮಾನಂದದಿಂ ಇರ್ದ್ದಪರ್.

ನಾರದಂ.-ವಿದುರಾ! ಪರಮೇಶ್ವರನ ಅನುಗ್ರಹಕೆ ಪಾತ್ರಂಗಳಪ್ಪ ಪಾಂಡವರ ಯೋಗಕ್ಷೇಮಮುಮಂ ಕೇಳಲೊಡಂ ಎನ್ನ ಬಗೆದಾವರೆ ದಳವೇರಿತು. ಇನ್ನೀಯೊಸಗೆಯುಮಂ ಸಗ್ಗಿಗರ್ಗ್ಗೆ ಅರಿಪಲ್ ಆಂ ಪೋರಮಡುವೆಂ. ನೀನುಂ ತಕ್ಕನುಡಿಗಳಿಂ ದುರ್ಯೋಧನಾದಿಗಳಂ ತಿರ್ದ್ದುವಂತೆ ಧೃತರಾಷ್ಟ್ರನಂ ಪ್ರೋತ್ಸಾಹಿಸು. (ಎಂದು ತೆರಳ್ವಂ)

ವಿದುರಂ.-ಪೂಜ್ಯರ್ ಇಂತು ಗಡ ಎನಗೆ ಬೆಸಸಿತ್ತರ್. ಆನುಂ ತಕ್ಕಂತೆ ಆರ್ಯಧೃತರಾಷ್ಟ್ರನಂ ಪ್ರೋತ್ಸಾಹಿಪೆಂ. ಆತನುಂ

---

ಏಗೊಂಡು--ಅಂಗೀಕರಿಸಿ, ತಕ್ಕಾರ್ಮೆ-ಯೋಗ್ಯತೆ, ಮಾತವಸಿಗಳ-ಮಹಾತಪಸ್ವಿಗಳ,

ಎಂತಾನುಂ ಸದುಪದೇಶಂಗೆಯ್ಯುದ್ದ ತಿರ್ದ್ದಪಂ. ಆದೊಡೆ ಅದೆಂತು ಸಫಲವಾದಪ್ಪುದೊ ಕರ್ಣಾದಿದುರ್ಮಂತ್ರಿಗಳ ದುರ್ಮಂತ್ರಕ್ಕೆ ಬಳಗಾದ ದುಷ್ಟದುರ್ಯೋಧನನೊಳ್ (ಎನುತ್ತೆ ಪೋಪಂ).

— ಇಂತಿದು ಶುದ್ಧವಿಷ್ಕಂಭಕಂ. —

( ಬಳಿಕೆ ಕರ್ಣಶಕುನಿದುಶ್ಶಾಸನರೊಡನೆ ಆಳೋಚಿಸುತ್ತಿರ್ಪ್ಪ ದುರ್ಯೋಧನಂ ಪುಗುವಂ. )

ದುರ್ಯೋಧನಂ.-ಆರ್ಯ ಮಾತುಳ ? ಪಾಂಡವರ ಬಳಿಗೆ ಪೋಗಿರ್ದ್ದ ವಿದುರಂ (ಅರ್ಧೋಕ್ತಿಯಲ್ಲಿ)

ಶಕುನಿ -ವತ್ಸ ! ಮರಳ್ದು ಬಂದನೋ ?

ದುರ್ಯೋಧನಂ.-ಇಂದು ಬಂದನೆಂದು ಸುದ್ದಿಬಂದುದು.

ಶಕುನಿ.-ಅವಂ ಅತ್ತಣ್ಗೆ ಪೋಗಿಬಂದಮಾತ್ರದೆ ಕಾರ್ಯಸಾಧನವೇನಾದುದು ? ಪೊಸ್ತಿಲಂ ಸಾರಿಸಿದಮಾತ್ರದೆ ಹಬ್ಬವಾದಪ್ಪುದೇ ?

ಕರ್ಣಂ.-ಮಹಾರಾಜನೆ ! ಅದೆಂತು ಬಂದಂ ? ನಿಮ್ಮ ತಾತಂ ಆತನಂ ಅಪ್ರಿಯನೆಂದು ಎಣಿಸಿರ್ದ್ದಂ ಗಡ.

ದುರ್ಯೋಧನಂ-ಅಂಗರಾಜ ! ಎಮ್ಮ ‡ಮುತ್ತಂ‡ ಅಂತಪ್ಪ ಸ್ಥಿರಚಿತ್ತನಲ್ತು ಗಡ.

ಕರ್ಣಂ.-ಆದೊಡೆ ಮತ್ತೆ ನಿಮ್ಮ ತಾತಂಗೆ ಪ್ರಿಯನೆನಿಸಿದನೋ?

ದುರ್ಯೋಧನಂ-ಅದರಿನೆ ವಿದುರಂ ಇತ್ತಲ್ ಎಳ್ತಂದುದು.

ಕರ್ಣಂ.-ಮಹಾರಾಜನೆ ! ವಿದುರನಂ ಉಯ್ಯಲ್ಕೆ ಅದಾರ್ ಪೋಗಿರ್ದ್ದರ್.

ದುರ್ಯೋಧನಂ-ಅಂಗರಾಜ ! ಸಂಜಯನಲ್ಲ ಮತ್ತಾವಂ ಈ ತಂತ್ರಮಂ ಅನುಗೊಳಿಸಲ್ ಸಾಲ್ವಂ ?

---

ಮುತ್ತಂ- ಮುದುಕ,

ದುಶ್ಶಾಸನಂ.-ಅಕ್ಕಟಾ! ಅದೆಂತು ಬಿಟ್ಟುಪೋಗಿರ್ದ ವಿದುರನೆಂಬ $ಗರಂ$ ಎಮ್ಮ ಮುತ್ತನಂ ಮಗುಳ್ದು ತಗುಳ್ದುದು.

ಶಕುನಿ.-ವತ್ಸಾ! $ಮಂತು$ ವಿದುರಂ ಇರ್ಪ್ಪಕ್ಕದೊಳಂ ಬಳವೊಕ್ಕು ಇನ್ನೇನಪಾಯಮಂ ತಂದಿಡುವನೋ?

ದುರ್ಯೋಧನಂ.-ಏಗೆಯ್ವಂ? ದೈವಯೋಗದಿಂ ಅಗಲ್ದಿರ್ದ ವಿದುರಂ ಮತ್ತೆ ಬಳಿಸಾರ್ದಂ ಗಡ. ಈ ವಿದುರಂ ಆಯೆಗ್ಗರ್ಗೆ ಮೇಲಂ ಬಯಸುವಾತಂ, ಎಮಗೆ ಮಚ್ಚರಿಪಂ. ಎಮ್ಮ $ಕಣ್ಣಲಿ$ ಕೆಳವಂ ಹಿತಾಹಿತಜ್ಞನಲ್ತು. ಕೇಳಿಂ —

ಕಂ॥ ಪೊರಗಣ ಪುರುಳಂ ಕುರುಡರ್ ।
ವೆರಮರಿಯದೊಡೇನೊ ಮನದೊಳರಿವುದನರಿಗುಂ ॥
ಪೊರಗಂ ಮೇಣಂತೊಳಗ್ಗುಂ ।
ಬರಿಗುರುಡಂ ನಮ್ಮ ಘುದುಪನನ್ನನುಮುಂಟೇ?॥೫೮॥

ತನಗೆ ಅರಿವಿಲ್ಲದೊಡೆ ಪೋಕೆ. ಆಂ ಪೇಳ್ವುದನಾದೊಡಂ ಗ್ರಹಿಸಲಾರ್ಪನೆ? ಅವಂಗೆ ಏವೇಳ್ದೊಡಂ ಏವುದು? “ಕೋಣನ ಮುಂದೆ ಕಿನ್ನರಿಬಾಜಿಸಿದಂತೆ, ಎಳ್ತನ ಮುಂದೆ ತೆಂಗಾಯಿಟ್ಟಂತೆ’ ವಿವೇಕವಿಲ್ಲದಾಕೆಳವಂ ತನ್ನ ತಮ್ಮನ ಮಕ್ಕಳ್ಗೆ ಎಕ್ಕಟಿಯೊಳ್ ಅದೇವೇಳ್ದು ಕಳಿಪುವನೋ? ಎಂತಾನುಂ ಆಪಾಂಡವರ್ ಇತ್ತಲ್ ನಡೆತರ್ಪರ. ಅವರ ಬನದತ್ತಣಿಂ ಮರಲ್ದು ಇತ್ತಲ್ ಬಾರದಂತೆ ಭೋಂಕನೆ ನೀಂ ತಕ್ಕರಿದು ಆಳೋಚಿಪುದು. ಏಕೆನೆ —

ವೃ॥ ಈಹಾರಾಶಿಯುಮಂ ತೃಣಕ್ಕೆ ಬಗೆದಾಂ ಕೂರ್ವಾಳ್ಗೆ ಮೆಯ್ಯೀವೆನೋ। ನೀಹಾರಾದ್ರಿಯ ಮೇಲ*ಣಿಂದುರುಳ್ವೆನೋ ಕಾಳ್ಕಿಚ್ಚಿನೊಳ್ ಬೀಳ್ವೆನೋ॥ ಆಹಾರಾದಿಗಳಂ ವಲಂ ತೊರೆವೆನೋ ಪೋತೀರ್ವೆನೆಂತಾನುಮಿಂ। ಹಾಹಾ!! ರಾಜ್ಯದೆ ಮತ್ತೆ ಬಂದು ನೆಲೆಗೊಳ್ವಾ ಸೀಚರಂ ನಿಟ್ಟಿಸೆಂ॥೫೯॥

---

ಗರಂ--ಗ್ರಹವು, ಮಂತು-ಮಂತ್ರಿ ಕಣ್ಣಲಿ--ಕುರುಡ, ೫೮. ವೆರಂ-ಸ್ಪುಟವಾಗಿ; ೫೯ ಕೊವಾಳ್ಗೆ--ಹರಿತವುಳ್ಳ ಕತ್ತಿಗೆ;

ಕರ್ಣಂ.--ದಲ್ ಮಾನಿಗಳ ಪ್ರಕೃತಿಯಿಂತಪ್ಪುದು.

ಶಕುನಿ.--ವತ್ಸ ದುರ್ಯೋಧನ! ಇದೇಂ ನೀಂ $ಜಾಣಿಲಿಯಂತೆ ಇಂತು ಆಳೋಚಿಸದೆ ನುಡಿದಪ್ಪೆ? ಕಟ್ಟೋಲಗದೊಳ್ ಎಲ್ಲರ ಕಟ್ಟಿದಿರೊಳ್ $ಸೂರುಳ್ದು$ ಕಟ್ಟಿಡಪಿವ್ರೊಕ್ಕ ಪಾಂಡವರ್ ನಿಯತಕಾಲಂಬರಂ ವನವಾಸಮುಂ ಅನುಗೊಳಿಸದೆ ತಾಮಿಲ್ಲಿಗೆ ಮರಲ್ದಪರೇ? ಅವರ್ ಎಂದುಂ ನನ್ನಿಯುಂ ಉಳವರಲ್ತು. ನಿಮ್ಮ ಬೊಪ್ಪಂ ಅದೊವ್ಮ್ಮೆಗ್ $ಬಳಿಯಟ್ಟಿ$ ಲಲ್ಲೆಯಿಂ ಅವರಂ ಊರ್ಗೆ ಬರವೇಳ್ದೊಡಂ ಯುಧಿಷ್ಠಿರಂ $ಏಗಂ$ ಬಗೆದಾರಂ ಅದರಿಂ ಎನಗೆ ತೋರುಗುಂ-ನಿಮ್ಮ ಬೊಪ್ಪನ ಮಾತಂ ಸಲಿಪರಂತೆ ಪೊರಗೆ ಅಭಿನಯಿಸುತ್ತೆ ನಾಂ ಬಳಗೆ ಗುರುಗುಮ್ಮಗೆ ಇರುತೆ ಅವರ್ ಇತ್ತಣ್ಗೆ ಮರಲ್ದು ಬಾರದಂತೆ ತಕ್ಕೆಸಕಂಗಳಂ ಎಸಗುತೆ ಇಪ್ಪುದು ತಗುಗುಂ.

ದುಶ್ಶಾಸನಂ.--ಆರ್ಯ ಮಾತುಳ! ನಿನ್ನ ಬುದ್ಧಿವಾದಂ ಬಪ್ಪಲ್ ತಕ್ಕುದು. ಆನುಂ ಈಪರಿಯೊಳ್ ಬಿನ್ನವಿಸುತಿರ್ದ್ದಪೆಂ ಮಹಾರಾಜಂಗೆ.

ದುರ್ಯೋಧನಂ.--ಉಃ ಇದೆನಗೆ ತಕ್ಕುದೆನೆ ತೋರದು.

ಕರ್ಣಂ.--ಮಹಾರಾಜ! ನಿನ್ನ ಮನದೊಳ್ ಏನಿರ್ಕ್ಕುಂ? ಬಾಯ್ಬಿಟ್ಟು ಪೇಳ್. ಎಮಗೆಲ್ಲರ್ಗ್ಗಂ ಪ್ರಕೃತದೊಳ್ ಬಂದೇ ಬಗೆ ತೋರುಗುಂ.

ದುರ್ಯೋಧನಂ--ಅಂಗರಾಜ! ತೆಗೆತೆಗೆ. ಎನ್ನ ಮನಮುಂ ಅರಿತರ್ ನೀವಿರೆ ಆಂ ಬಾಯ್ಬಿಟ್ಟು ಪೇಳವೇಳ್ಕುಮೋ! ಚೀ ನಿಮ್ಮ ಆಳೋಚನೆ ಎನಗೆ $ಅಣಂ$ ಅಭಿರುಚಿಸದು. (ಎಂದು ದೂರಂ ಸಾರ್ವಂ)

ಕರ್ಣಂ.--(ಇನಿತು ಚಿಂತಿಸಿ) ಎಲೆ ಶಕುನೀ! ಎಲೆ ಯುವರಾಜಾ! ಓಡೆಯುಂ ಆವಾಡಿದ ನುಡಿಯುಂ ಬಲ್ಲದೆಪೋದಂ. ಆಂ ಆತಂಗೆ ಪ್ರಿಯರಪ್ಪೊಡೆ ಬೇರೆಸಕಂ ಎಸಗಲ್ ತಕ್ಕುದು.

---

ಜಾಣಿಲಿ--ಜಾಣತನವಿಲ್ಲದವನು, ಸೂರುಳ್ದು--ಪ್ರತಿಜ್ಞೆಮಾಡಿ; ಬಳಿಯಟ್ಟಿ--ದೂತನನ್ನು ಕಳುಹಿ, ಏಗಂ-ನಿಶ್ಚಯವಾಗಿ, ಅಣಂ-ಸ್ವಲ್ಪವಾದರೂ.

ದುಶ್ಯಾಸನಂ—ಅಂಗರಾಜ! ಅದೇನದೇಂ??

ಕರ್ಣಂ—ಆಲಿಸಿಂ—

ಕಂ॥ ಪಟುಭಟರೊಡನಟವಿಯೊಳಾ।
ಪಟಸುತ್ತ ಟವಟಗರಂ ಪ್ರಡುಂಕುತೆ ಹಟದಿಂ॥
ದಿಟದಿಂದಕ್ಕಟ ಕೊಲೆಯುಂ।
ತ್ಕಟಮುದಮುರಸಂಗಮಪ್ಪುದತಿಸುಖವೆಮಗಂ॥೬೦॥

ದುಶ್ಯಾಸನಂ—ಅಂಗರಾಜ! ಇದಲ್ತೆ ಆಳೋಚಂ. ಎಮ್ಮ ಸಾಧಾರಣಮಪ್ಪ ಬುದ್ಧಿಗೆ ತೋರದೆ ಪೋದುದು. ಚೆನ್ನನೆನುಡಿದ್ಯೆ ಚೆನ್ನನೆ ನುಡಿದ್ಯೆ. ಅಂತಕ್ಕೆ; ಮಹಾರಾಜಂಗೆ ಅರಿಕೆಗೆಯ್ವಂ.

(ಎಂದೆಲ್ಲರುಂ ದುರ್ಯೋಧನನ ಬಳಿಗೆ ಸಾರ್ವರ್)

ದುರ್ಯೋಧನಂ—(ಚಿಂತೆಯುನಭಿನಯಿಸಿ) (ಸ್ವಗತಂ)

ವೃ॥ ಧರೆಯೊಳ್ ಜ್ಞಾತಿಜನಂ ಬಲ್ದುರ್ಗಂಕಿರೆಯುದೇಂ ಪೇಳ್ಕಿಚ್ಚಿನಿಂದಪ್ಪುದೆಂ। ದರುಹಪ್ಪರ್ಗಳ್ವ ಸುಭಾಷಿತಾರ್ಥವರರೇ ತಥ್ಯಂಗಡಾ ತೋರುಗುಂ॥ ದುರುಳಪ್ಪಾಂಡುಕುಮಾರರಂ ನೆನೆಯುತಿಪ್ಪೆನ್ನಾತ್ಮದೊಳ್ ಸುತ್ತುಗೊಂ। ಡುರಿಯುತ್ತಿರ್ಪ್ಪುದು ಬೇಗೆ ಕಿಚ್ಚುವೊಲಿದರ್ಕಾನೀಗಳೇಗೆಯ್ದಪೆಂ॥೬೧॥

ಕಂ॥ ನಡೆನಡೆಯೊಳ್ ದೆಸೆದೆಸೆಯೊಳ್।
ನುಡಿನುಡಿಯೊಳ್ ನಿವಿಸನಿವಿಸದೊಳ್ ಬಗೆವಗೆಯೊಳ್॥
ಪಿಡಿದಳಿಮುರುಳ್*ಳವೋಲ್ ಹಾ।
ಕಿಡುಕರ್ ಬಿಡದೆನ್ನ ಕಣ್ಗದೇಂವಂದಪರೋ॥೬೨॥

ಅದರಿಂ—

ವೃ॥ ಸುರುಚಿರಮಪ್ಪ ಬಿರ್ದ್ದಣಿಸನಾಟಸದೆನ್ನಯ ಜೆಹ್ವೆ ಸಿದ್ರಿಯೊಳ್। ಬರಸಿ ವಿಳಾಸದಿಂ ಬಳಿಗೆ ಬಂದೊಡಮಿಕ್ಷಿಸಲೊಲ್ಲದಕ್ಷಿ ಮೇಣ್॥ ಪುರುಳಿಯ ಸೊಲ್ಲದೇಕೆನಿಪ ನಲ್ಲಳ ನಲ್ನುಡಿ ಬೇಡ ಕರ್ಣ್ಣಕಾ। ದರಣದಿ ನಚ್ಚುಳಾಯ್ತ್ರರೆಸಪ್ರೊಳಗೆಮುಂ ಮನಮೊಲ್ಲದಕ್ಕಟಾ॥೬೩॥

೬೦ ಅಟಸುತ್ತ—ಗಮಿಸುತ್ತ, ೬೨. ಅಳಿಮುರುಳ್ಗಳವೋಲ್—ಕೆಟ್ಟಪಿಶಾಚಗಳಂತೆ; ೬೩ ಪುರುಳಿಯ—ಹೆಣ್ಣುಗಿಳಿಯ, ಅಚ್ಚುಳಾಯ್ತರ್—ಪರಿಚಾರಕರು.

ಅಂತಪ್ಪ ಚಿಂತಾಭರದಿಂ ಎನ್ನ ಪಿರುಂಜವ್ವನಮುಂ ಕುಂದುತಿರ್ಕ್ಕುಂ. ಅಂತಲ್ಲದೆ ಪೇೞ್ವರೆ? "ಚಿಂತೆಯೆ ಮುಪ್ಪು ಸಂತಸಮೆ ಜವ್ವನಂ" ಎಂದು. (ತಿರುಗಿ ನೋಡಿ) ಇದೆಕೊಳ್ ಇತ್ತಲ್ ಎನ್ನ ಬಹಿಃಪ್ರಾಣಂಗಳ್. ಇವರೊಳ್ ಮತ್ತಂ ಆಲೋಚಿಸಿದಪೆಂ. (ಕರ್ಣನಂ ನೋಡಿ) ಅಂಗರಾಜ ! ಅದೇಂನೀವಿತ್ತಲ್?

ಕರ್ಣಂ-ಮಹಾರಾಜನ ! ತಾವರೆ ಪಾವಸೆಯಿಂ ಮುಸುಂಕಿದೊಡಂ ಅದನುೞಿದು ಬಂಡುಣಿಗಳ್ ಇನ್ನೆಲ್ಲಿಪೋಕುಂ? ಚಂದಿರಂ ಬಿರ್ಮ್ಮುಗಿಲ್ಗಳಿಂ ಬಾಸಣಿಸಿದೊಡಂ $ ಜೊನ್ನವಕ್ಕಿಗಳ್ $ ಅವನಂ ತೊರೆದು ಇನ್ನೆತ್ತಲೆಯ್ದುಗುಂ? ನೀಂ ಬೇಸತ್ತೊಡಂ ನಿನ್ನಂ $ ಪಡಿಸಣಿಗರ್ $ ಆಂ ಉೞಿದಪೆನೇ?

ದುರ್ಯೋಧನಂ-ಅಂಗರಾಜ ! ತಾವರೆಯೊಂದಿಲ್ಲದೊಡೆ ಬಂಡುಣಿಗಳ್ಗೆ ಬನದೆ ಮತ್ತಿನ ನರುವೂಗಳ್ ಇಲ್ಲವೆ? ಆನೊರ್ವ್ವಂ ಇಲ್ಲದೊಡೇಂ? ನಿಮಗೆ ಜಗದೆ ಪಲಂಬರ್ ವಲ್ಲಭರಿರ್ದ್ದಪರ್.

ಕರ್ಣಂ- ಮಹಾರಾಜ ! ನೀನಿಂತು ಪೇೞ್ವುದೆ? ಸಕಲಚರಾಚರಪ್ರಪಂಚಮುಂ ಸಮೆದ ಆ $ ಅಲರಿಂಚಂಗಂ $ ತಾಯೆನಿಸಿ, ನಾರಾಯಣನ ನಾಭಿಯಂ ಸೊಬಗುವಡಿಸಿ ಆತನ $ ಕಣ್ಬೊಣರ್ಗ್ಗೆ $ ಉಪಮೆಯಾಗಿ ಮಾಲಕ್ಕುಮಿಗೆ ಅಂತಃಪುರಮೆನಿಸಿ ನೇಸಱ ಭೂಸುರವಪ್ಪನೇಹಮುಂ ಪಡೆದು ಸಾಸಿರ್ಗದಿರನೆನಿಸಿದ ಆತನಂತೆ ತಾನುಂ $ ಸಾಸಿರ್ಗದಿರ್ಗಳಿಂ $ ತಳ್ತು ಮೂಜಗದ $ ಚೆಲ್ಲಗಾರ್ತಿಯರ $ ಚೆಲ್ವಿನ ಮೊಗಕೆ ಉಪಮಾನರತ್ನವೆನಿಸಿ ಸುಕವಿಮಹಾಶಯರ ಜೀವಾತುವೆನಿಸಿ ದೊರೆವೆತ್ತ ತಾವರೆಗೆ ಪಾಸಟಿಯಪ್ಪ ಜಗನ್ಮಂಗಳಕರವೆನಿಪ ಪೂ ಪೆರತಾವುದು? ಜಗದೊಳ್ ಪಲಂಬರಿರ್ದೊಡೇಂ? ಅಂತು ತಾವರೆಯಂತೆ ಪೆರ್ಮ್ಮೆವಡೆದು ರಾಜನ್ಯಚೂಡಾಮಣಿಯೆನಿಸಿ ಎಮಗೆ ವಲ್ಲಭನೆನಿಪಾತಂ ನೀನೊರ್ವ್ವನೆಗಡ.

---

ಜೊನ್ನವಕ್ಕಿಗಳ್-ಚಕೋರಂಗಳು, ಪಡಿಸಣಿಗರ್-ಸ್ವಾಮಿಯೆಂಜಲನ್ನು ತಿನ್ನುವರು (ಸೇವಕರು) ಅಲರಿಂಚ-ಬ್ರಹ್ಮ, ಕಣ್ಬೊಣರ್ಗ್ಗೆ-ನಯನದ್ವಂದ್ವಕ್ಕೆ, ಸಾಸಿರ್ಗದಿರ್ಗಳಿಂ-ಕದಿರ್-ಕಾಂತಿ ಮತ್ತು ದಳ, ಚೆಲ್ಲಗಾರ್ತಿಯರ-ವಿಲಾಸಿನಿಯರ

ದುರ್ಯೋಧನಂ-ಅಂಗರಾಜ ! ಆಂ ಕೆಲವರ್ಮೆ ಕನಲ್ದು ಬಿರುನುಡಿಸಲಿಗೆಗಳಿಂ ನಿಮ್ಮ ಎರ್ದೆಯಂ ಇರಿದೊಡಂ ಇಂತು ನೀವೆನ್ನೊಳ್ ಒಸೆದಿರ್ಪುದು ಎನ್ನ ಭಾಗ್ಯವಿಶೇಷವಲ್ತೆ ?

ಕರ್ಣಂ.-ಮಹಾರಾಜನೆ ! ಮುಗಿಲ್ ಕಾರ್ಗಾಲದೊಳ್ ಒರ್ಮೆ ಇರ್ಮೆ ಮೂಮೆ ನಾಲ್ಮೆ ಅಯ್ಮೆ ಅರುಮೆ ಏಳ್ಮೆ ಎಣ್ಮೆ $ ತೊಮ್ಮೆ ಪಯಿಂಮೆಯಲ್ತು , $ ನೂರ್ಮೆ ಸಾಸಿರ್ಮೆ ಪಲರ್ಮೆ ಬೆಟ್ಟಿತಪ್ಪ $ ಆಲಿವರಲ್ಗಳಿಂ $ ಸಿಡಿಲ್ಮಿಂಚುಗಳಿಂ ತಳ್ಪೊಯ್ಗುಂ. ಆದೊಡಂ ನಿಖಿಳಜಗಜ್ಜೀವನವೆನಿಸಿದ ಆ ಮುಗಿಲನೆ ನಂಬಿರ್ಪ ಚಾದಗೆಗಳ್ ಅದಂ ಓಸರಿಕುಮೇ ? ಇಂತಿರೆ ನೀಂ ಬಾದುಸೂಳ್ ಬೇಸತ್ತು ಬಿರುನುಡಿಯಂ ಆಡಿದ ಮಾತ್ರದೆ ಎರಡಿಲ್ಲದ ಸಾಜಮಪ್ಪ ಅಳ್ಕರುಳ್ಳ ನಿನ್ನಂ ಆಂ ತೊರೆದು ಪೋಪೆನೇ ?

ದುರ್ಯೋಧನಂ-ಅಂಗರಾಜ! ನಿಮ್ಮ ಕೃತಜ್ಞತೆಗೆ ಸಂತಸಂಬಡುವೆಂ. ಅದಿರ್ಕೆ. ಎನಗೆ ಚಿಂತೆಯೊದವಿರೆ ಇಂದು ನಿನ್ನ ಮೊಗಂ ಏಕೆ ಕಳೆಗುಂದಿರ್ಕುಂ ? (ಬಗೆದು) ಮೇಣ್ ಮಿತ್ರಮಣಿಯೆನಿಸಿದ ನಿನಗಿದು ತಕ್ಕುದು. ಏಕೆನೆ -

ಕಂ॥ ಕೆಳೆಯಂ ಕಳೆಗೊಂಡಿರೆ ತಾಂ ।
ಕಳೆಗೊಳ್ಗುಂ ಮರುಗೆ ಮರುಗುಗುಂ ಗಡ ಮಾನ್ಯಂ ॥
ಚಳಗದಿರಂ ಬೆಳಬೆಳಗಿರೆ ।
ಬಳೆಗುಂ ಮುಳುಗಿದೊಡೆ ತಗ್ಗುಗುಂ ಪೊಳೆಯಾಣ್ಮಂ ॥೬೪॥

ಕರ್ಣಂ - ಮಹಾರಾಜನೆ ! ಈಗಳ್ ಇನ್ನೊಂದಂ ಆಳೋಚಿಸಿರ್ಪೆವು.

ದುರ್ಯೋಧನಂ.-ಅದೇಂ ? ನುಡಿವುದು.

---

ತೊಮ್ಮೆ, ಪಯಿಂಮೆ-ಒಂಬತ್ತಾವೃತ್ತಿ, ಹತ್ತಾವೃತ್ತಿ. ಆಲಿವರಲ್-ಆಣೆಗಲ್ಲು ;

೬೪ ಚಳಗದಿರಂ-ಚಂದ್ರನು,

ಕರ್ಣಂ.-(ಸುತ್ತಲುಂ ನೋಡಿ) ಇತ್ತಲ್ ಇನ್ನಾರುಂ ಇಲ್ಲಂ ಗಡಾ ?

ದುರ್ಯೋಧನಂ.-(ಸ್ವಗತಂ) ಆದೊಡೇನೋಸಾವ್ವರಸ್ಯವಿಕಾರ್ಯ್ಯಂ. (ಪ್ರಕಾಶಂ) ಅಂಗರಾಜ ! ಎಮ್ಮ ಚತುಷ್ಟಯಮೆ.

ದುಶ್ಶಾಸನಂ.-ಆದೊಡಂ ಉಚ್ಚಸ್ವರದಿಂ ಪೇಳ್ವುದಾಗದು. ಏಕೆನೆ-"ಮೂವರ ಕಿವಿಯುಂ ಮುಟ್ಟಿದುದು ಮೂರುಲೋಕಮುಂ ಮುಟ್ಟುವುದು" ಎನರ್. ಇಂತಿರೆ ಐದನೆಯವನ $ ಕೊಡಂಕೆಯುಮಂ $ ಪೊಕ್ಕೊಡೆ ಬಳಿಕಂ ಆಂ ಅದೇಂ ಗೆಯಲಕ್ಕುಂ ?

ಶಕುನಿ.-ದಲ್‌ದಲ್. ಆಗದಾಗದು. ಉಗ್ಘಡಿಸಿ ಪೇಳ್ವುದಾಗದು.

ಕರ್ಣಂ.-ಆದೊಡೆ ಮಹಾರಾಜನ ಕೊಡಂಕೆಯೊಳೇ ಉಸಿರ್ವೆಂ. (ದುರ್ಯೋಧನನಂ ನೋಡಿ) ಮಹಾರಾಜನ ! ಆಲಿಸು. (ಎಂದು ದೂರಕೆ ಉಯ್ದು ಕಿವಿಯೊಳ್ ಪೇಳ್ದು ಕೈಯ ಸನ್ನೆಯಿಂದಮುಂ ಸೂಚಿಸಿದಪಂ)

ದುರ್ಯೋಧನಂ.-(ಸಿರಮಂ ತೊನೆದು)ಸಾಧು ಅಂಗರಾಜ ! ಸಾಧು. ಚದುರನಪ್ಪ $ ಬೆಜ್ಜಂ $ ಬಗೆವಗೆಯ ಬರಿಮರ್ದ್ದುಗಳನಿತ್ತು ಸಂಕಟಂಗೊಳಿಸದೆ ಕುತ್ತಂಬಗೆದು ಅವುದರ್ಗೆವ್ರೊಲ್ ಗುಣಮಪುದರ್ ತಕ್ಕ ಮರ್ದ್ದಂ ಇತ್ತು ಥಟ್ಟನ ಚಿಕಿತ್ಸೆಗೆಯ್ವಂತೆ ನೀಂ ಎನ್ನ ಬಗೆಯ ಇರವಂ ಅರಿತು ತಕ್ಕನುಡಿಯುಂ ನುಡಿದೈ. ಆದೊಡೆ ಇದು ದೈವಾನುಗ್ರಹದಿಂ ಗಡ ನಿರ್ವಿಘ್ನಮಾಗಿ ಈಡೇರವೇಳ್ಕುಂ.

ಕರ್ಣಂ.-ಮಹಾರಾಜನೆ ! ದಲ್, ಬೆಜ್ಜಂ ತಕ್ಕ ಮರ್ದ್ದಂ ಇತ್ತು ಚಿಕಿತ್ಸೆಗೆಯ್ದೊಡಂ ಅದು ದೈವಾನುಕೂಲ್ಯದಿಂದಮೆ ಸಫಲಮಕ್ಕುಂ.

ದುರ್ಯೋಧನಂ.-ಅಂಗರಾಜ ! ರೋಗಿಯ ಅದೃಷ್ಟಂ ನೇರಿತ್ತಾದೊಡೆ ಬೆಜ್ಜನ ಚಿಕಿತ್ಸೆಯುಂ ನೇರಿತಕ್ಕುಂ. ಅಂತು ಆಂ ಅದೃಷ್ಟಶಾಲಿಯಾದೊಡೆ ನಿಮ್ಮ ಆಳೋಚನೆಯೆನಗೆ ಪಣ್ಗುಂ.

ಕರ್ಣಂ.-ಮಹಾರಾಜನೆ ! ಪಣ್ಗೆ, ಪಣ್ಣದಿರ್ಕ್ಕೆ, ಪಣ್ವುದಂ ಪಣ್ಣದಿರಲಾಗದು.

---

ಕೊಡಂಕೆ-ಕಿವಿ, ಬಜ್ಜಂ-ವೈದ್ಯನು, ಕುತ್ತ-ರೋಗ ;

ದುರ್ಯೋಧನಂ.-ಅಂಗರಾಜ ! ನಿನ್ನ ನುಡಿ ತೊದಳಲ್ತು. ತೊದಳ್ವಾತುಂ ಪುಟ್ಟಿರೆ ಸಾವನೆಂದರಿತಿರ್ದೊಡಂ ಪಣ್ಣುವ ಚಿಕಿತ್ಸೆಯುಂ ಪಣ್ಣದಿರಲಕ್ಕುಮೇಂ?

ದುಶ್ಯಾಸನಂ.-ಮಹಾರಾಜನೆ ! ಈಗಳ್ ಆವಾಳೋಚಿಸಿದ ಕಜ್ಜಂ ಪಣ್ವಿವಿಷಯದೊಳ್ ಶಂಕೆಯೇಕೆ ?

ದುರ್ಯೋಧನಂ.--

ಕಂ॥ ಆಲೋಚಿಸಿದೆನ್ನೀಕೃತಿ।
ಫಾಲಾಕ್ಷನ ದಯದಿನಮರು ಪಣ್ತೊಡೆ ಬೇಗಂ॥
ಮೂಲೋಕದೊಳಾನೇ ಕೃತಿ।
ಯಾಲೋಕಿಪ್ಪೊಡೆನಗೆ ಸಾಟಿಯಪ್ಪರುಮೊಳರೇ ॥ ೬೫ ॥

ಆರ್ಯಮಾತುಳ ! ಅಂಗರಾಜ ! ಯುವರಾಜ ! ಇಂತಳ್ವದೆ ದಳಮುಂ ನೇರ್ಪಡಿಸಲ್ ನೀಂ ತೆರಳ್ವುದು. ಆನುಂ ಮುಂದಣ ಸನ್ನಣಮುಂ ಅನುಗೊಳಿಪೆಂ.

ಕರ್ಣಾದ್ಯರ್.-ಅಂತಕ್ಕೆ. (ಎಂದು ಸಸಂಭ್ರಮಂ ತೆರಳ್ವರ್)

ದುರ್ಯೋಧನಂ.-ಅದಾರಿತ್ತಲ್ ?

ಕಂಚುಕಿ.-(ಬಂದು) ಮಹಾರಾಜನೆ ! ಬೆಸಸುವುದು.

ದುರ್ಯೋಧನಂ.-ಎಲೆ ಆರ್ಯವೃತ್ತ ! ಆಸೀಗಳ್ ತಾತನಂ ಕಂಡು ಎಕ್ಕಟಿಯೊಳ್ ಇನಿತು ನುಡಿವುದಿರ್ಕುಂ. ಅದರಿಂ ನೀಂ ಆತನ ಸನ್ನಿಧಾನಕೆ ಪೋಗಿ ಅತ್ತಲ್ ಆರಾನುಂ ಇರ್ದೊಡೆ ಅವರಂ ಪೊರಗಣ್ಗೆ ಕಳಿಪಿ ತಕ್ಕವಸರಮುಂ ಎನಗೆ ಮುಣ್ಣಕ್ಕನೆ ಬಂದು ಬಿನ್ನವಿಸು. ಆಂ ಅನ್ನೆಗಂ ಜಗನ್ಮೋಹನವಿಲಾಸದೊಳ್ ದೇವಿಯ ಸನ್ನಿಧಾನದೊಳಿರ್ದಪೆಂ. (ಎಂದು ಪೋಪಂ)

ಕಂಚುಕಿ.-(ಬಿಸುಸುಯ್ದು) ಜಗದೊಳ್ ಮನುಜಂಗೆ ಪಾರತಂತ್ರ್ಯಮೆಂಬುದೇ ನರಕಂ. ಅದರೊಳ್ ಸೇವಾವೃತ್ತಿ ಕಷ್ಟಂ. ಅದರೊಳಂ ರಾಜಸೇವಾವೃತ್ತಿ ಕಷ್ಟತರಂ. ಅವ್ಯವಸ್ಥಿತಚಿತ್ತನಪ್ಪ ಮಾರಾ

ಯನ ಸೇವೆ ವಿಶೇಷದಿಂ ಕಷ್ಟತರಂ. ಸೇವಾವೃತ್ತಿಗೆಯ್ವಾತನ ಬಾಳ್ ನಾಯಬಾಳ್. ಅಂತಲ್ಲದೆ ಸೇವೆಗೆ ಶ್ವವೃತ್ತಿಯೆಂಬ ಪೆಸರಿನ್ನೊಂದು ಬಂದುದೇ? ಏಕೆನೆ - ಆವಗೆಯ್ತುಮುಮಂ ಮೆಯ್ವೆಟ್ಟುಗೆಯ್ಯಲಾಗದು. ತಕ್ಕುದಂ ಮಾಣೆನ್ನುಂ. ತಗದುದಂ ಮಾಡೆನ್ನುಂ. ಬಸೆವೆಡೆಯೊಳ್ ಮುನಿವಂ. ಮುನಿವೆಡೆಯೊಳ್ ಬಸೆವಂ. ಈ ತೆರನುಂ ಇವನೊಳ್ ದಿಡವಲ್ತು. ಎಮ್ಮ ಪಾರಾಯನ ಮಾಳ್ಕೆಯೋ ಬೇರೆ. ಈತಂಗೆ ಇನ್ನೀದರ ಮೂವರುಂ ಬಡಗೂಡಿದೊಡೆ, ಜವ್ವನಂ ಸಿರಿ ಅರಸು ಮಗುಳ್ತನಂ ಎಂಬಿವು ನಾಲ್ಕುಂ ನೆರೆದಂತೆ ಗಡಕ್ಕುಂ. ಪೂಜ್ಯನುಂ ಗುರುವುಂ ಆದ ವೃದ್ಧಮಹಾರಾಜನುಮಂ ಪುಟ್ಟುಂಗುರುಡನೆಂದುಂ ಜಾಣಿಲಿಯೆಂದುಂ ನಾಣಿಲಿಯೆಂದುಂ ಪರಿಪರಿಯೊಳ್ ಪಳಯುತೆ ಪುಲ್ಗಬಗೆವಂ. ಈತನ ಹರಯಮುಂ ಸಿರಿಯುಂ ಅದೇಂ ಸ್ಥಿರಮೋ? ಮಾಮಹಿಮರಪ್ಪ ಪಾರಾಯರ ಬಾಳುಂ ಮುನ್ನೇನಾದುದೋ? ಮಾನವಂ ಧರ್ಮನಿರತನಾಗಿ ಸತ್ಕೀರ್ತಿಮಾನವಂ ಗಳಯಿಸವೇಳ್ಕುಂ.

ಕಂ॥ ತನುಗಳ್ ಸುಸ್ಥಿರವಲ್ಲಂ।
ಧನಕನಕಾದಿಗಳುಮುಳಿಗುವೆಂಬುದು ನಿಸದಂ॥
ಸನಿಹದೆ ಪಾರ್ದ್ದಿರ್ಕ್ಕುಂ ಮಿ।
ಳ್ತನವರತಂ ಧರ್ಮದಲ್ಲಿ ಮನನಿಡವೇಳ್ಕುಂ॥೬೬॥

ಇಂತೆಂಬುದಂ ಎಮ್ಮ ಪ್ರಭು ಬರ್ಮಯುಂ ಮನದೊಳ್ ಎಣಿಸನಲ್ತು. ಎಂದುಂ ಪರಹಿಂಸಾಪರಸ್ವಾಪಹಾರಾದಿಗಳಿಂ ಪೊಳ್ತುಂ ನೂಂಕುವಂ (ಬಗೆದು) ಎನಗೆ ಉಪಾಶ್ರಯಣೀಯನಪ್ಪ ಒಡೆಯನಂ ಏಕೆ $ ಗಾರಣಂಗೊಳ್ವುದು? $ ಆತಂ ಎಂತಾನುಂ ಇರ್ಕ್ಕೆ. ಇನ್ನನಂ ಓಲೈಸಿ ಬರ್ದುಕುವುದು ಎನ್ನ ಪಣೆಬರೆಪಂ. ಇದೆಲ್ಲಮುಂ ಪಾಳ್ಬಡತನದಿಂದಮೋ ಗಡ. ಬಡವನಾಗಿ ಪೊಡವಿಯೊಳ್ ಬಡಪೆತ್ತುಬಾರದು.

---

ನಾಣಿಲಿ—ಲಜ್ಜಾವಿಹೀನ, ೬೬ ನಿಸದಂ-ನಿಶ್ಚಯ, ಸನಿಹ ಸಮೀಪ; ಗಾರಣಂ-ದೂರು; ಇನ್ನನಂ—ಇಂತವನನ್ನು.

ವೃ|| ಇವನೊಳ್ ನೇಹವೊಡಚ್ಚರಾರುಮೊಲವಿಂ ಮಾತಾಡರೆಂದುಂ ಮಹೋತ್ಸವದಂದುಂ ಕಡೆಗಣ್ಚುವರ್ ಧನಿಕರಾವಾಸಂಗಳಲ್ಲೀತನಂ|| ತವೆ ನಾಣ್ಚುತ್ತಿದೂರದೊಳ್ ಸುಳಿದಪಂ ಕೀಳ್ಪಟ್ಟೆಯುಟ್ಟಿರ್ಪವಂ | ಬುವಿಯೊಳ್ ದೀನತೆಯೆಂಬುದಾರನೆಯು ಮಾಪಾಪಂ ದಲೇವೇಳ್ದಪೆಂ ||೬೭||

ಕಂ|| ಬಡತನವಡಸಿದವಂ ತಾಂ |
ಕುಡಲ್ಕೆ ಧನಿಯೆಡೆಗೆ ಪೋದೊಡಂ ತಿರಿಯುಲಿವಂ ||
ನಡೆತಂದನೆಂಬಹಾಸ್ಯ |
ಕ್ಕೆಡೆಯೆನಿಸುವನಕಟ ದುಸ್ಸಹಂ ದಾರಿದ್ರ್ಯಂ ||೬೮||

ಸ್ವಾತಂತ್ರ್ಯವೆಂಬುದೆ ಸಗ್ಗಸೊಗಂ. ಬಡವನಾದೊಡಂ ಪರಮೇಶ್ವರನಿತ್ತನಿತರೊಳ್ ತಣಿದು ಪೆರರ್ಗೆ § ಮಾರುವೋಗಿ § ಪಡಿಸಣಿಗನೆನಿಸದೆ ಸಾಲಿಗನಾಗದೆ ಸ್ವತಂತ್ರನಾಗಿರ್ಪನೆ ಧನ್ಯಂ. ಇಂದೀವಿಚಾರದಿನೇಂಫಳಂ? ಆಯ್ತು ಪೋಯ್ತು. ಈಗಳೇಗೆಯ್ವೆಂ? ಮಹಾರಾಜನ ಬೆಸಂ ವಿಚಿತ್ರನಾದುದು. ವೃದ್ಧಮಹಾರಾಜನ ಸನ್ನಿಧಾನದೊಳಾರಾನುಮಿರೆಯುವರಂ ಪೊರಗಣ್ಗೆ ಕಳಿಪಿ ಸರ್ರನೆ ತಕ್ಕವಸರಮಂ ಆತಂಗೆ ತಿಳಿಯಿಸವೇಳ್ಪುದೆಂತು? ಒಳ್ಳಿತು. ಪೋಗಿ ನೋಡುವೆಂ. (ಎಂದು ಕಿರಿದುದೂರಂ ಸಾರ್ದು) ಇದುವೆ ವೃದ್ಧಮಹಾರಾಜನ ಭುವನೇಶ್ವರೀಭವನಂ. ಸುರಪತಿಗಂ ಮಿಗಿಲೆನಿಪ ಎಮ್ಮ ಮಾರಾಯನ ಐಸಿರಿಗೆ ಸರಿಯಾವುದು? ಸಿರಿದೇವಿಯಿಲ್ಲಿ ನಲ್ದುನರ್ತಿಸುಗುಂ. (ಕಿವಿಗೊಟ್ಟು) ಒಳಗೆ ಆರೋ ಮಾತುಗುಟ್ಟುತಿರ್ಪರಂತೆ ತೋರುಗುಂ. (ಪರಾಮರ್ಶಿಸಿ) ಆರುಮಲ್ತು; ಪೂಜ್ಯರ್ ವೇದವ್ಯಾಸಮಹರ್ಷಿಗಳ್. ಅಹಹ! ಆಂ ಬಗೆದಂತೆಯೆ ಆಯ್ತು. ಎಂತು ಇವರಂ ಪೊರಗಣ್ಗೆ ಕಳಿಪುವುದು? ಈಗಳ್ ಒಳವುಗುವುದು ಎನಗೆ § ಮೊಗ್ಗೇ? § ಅಪ್ಪುದಕ್ಕೆ. ? ಚಣಂ ಪಾರುತೆ ಈ § ಪಡಿಯ ಪುದಿಯೊಳ್ § ನಿಂದಿರ್ಪೆಂ (ಎಂದು ಅಂತು ಮಾಳ್ಪಂ)

(ಒಳಕೆ ವ್ಯಾಸಮಹರ್ಷಿಗಳೊಡನೆ ಮಾತುಗುಟ್ಟುತಿರ್ಪ ಧೃತರಾಷ್ಟ್ರಂ ಪುಗುವಂ)

---

೬೭. ಕಡೆಗಣ್ಚುವರ್—ತಿರಸ್ಕರಿಸುವರು, ಮಾರುವೋಗಿ—ವಿಕ್ರೀತರಾಗಿ (ಅಧೀನರಾಗಿ) ಮೊಗ್ಗೇ—ಸಾಧ್ಯವೇ? ಪಡಿಯಪುದಿಯೊಳ್—ಬಾಗಿಲಪಕ್ಕದಲ್ಲಿ,

ಧೃತರಾಷ್ಟ್ರಂ.-ಪೂಜ್ಯರೆ! ಮನುಜಂಗೆ ಚಿಂತೆಯೊಮ್ಮೆಯೊದವೆ ಎಂತಾನುಂ ತರಹರಿಸಲಕ್ಕುಂ. ನಿರಂತರಂ ಚಿಂತೆ $ ತೇನತೇನಂ $ ಬಂದೊದವೆ ಬಾಳ್ವುದು ಕಷ್ಟತರವಲ್ತೆ.

ವೃ॥ ಪೆಣನಂ ಚುಚ್ಚುರ್ವೆನಾನೆನುತ್ತೆ ಚಿತೆ! ನೀನೇತರ್ಕ್ಕೆ ಗರ್ವಿಪ್ಪೆ? ಧಾ। ರಿಣಿಯೊಳ್ ಜೀವಿಸುವಾತನಂ ಕಡುಪಿನಿಂದಾಂ ಚುಚ್ಚುರ್ವೆಂ ನೋಡ ಗಾ॥ ರಣವಲ್ತೆ ಬಿಗುರುತ್ವವೆನ್ನೊಳೆಸೆಗುಂ ನಿನ್ನೊಳ್ ಕರಂ ಲಾಘವಂ। ತೊಣೆ ನೀನೆಂತೆನಗೆಂದು ಸೂಚಿಪವೊಲಿರ್ಪ್ಪ ಚಿಂತೆ ಸಾಮಾನ್ಯಮೇ ॥೧೯॥

ಅಂತಪ್ಪ ಚಿಂತೆಯಿಂ ಪಗಲಿರುಳುಂ ಬೇಗುದಿಗುದಿವೆನಗೆ ಕರ್ತವ್ಯಮೇ ತೋರದು. ನೀವೀಗಳ್ ಉಸಿರ್ದಂತೆ ನಿಮ್ಮೊಳಪ್ಪ ಕುರುಕುಲದೊಳ್ ದುರ್ಲಲಿತರ್ ದುರ್ಯೋಧನಾದಿಗಳ್ ಪುಟ್ಟಿ ‡ ಕರೆಯಂ ‡ ಬಡರಿಸುತಿರ್ದ್ದಪರ್. ಏವೆಂ?

ವೃ॥ ಹಿತಮಾಗೆನ್ನಯ ಮಾತನೊಮ್ಮೆಯುಮವಂ ದುರ್ಯೋಧನಂ ಲಾಲಿಸಂ। ಸತತಂ ಪಾಂಡುವ ನಂದನರ್ಗ್ಗೆಡರನೇ ಆಳೋಚಿಸುತ್ತಿರ್ದ್ದಪಂ॥ ಮತಿವಂತರ್ ವಿನಯಾನ್ವಿತರ್ ಸುಚರಿತರ್ ಸತ್ಪುತ್ರರುಳ್ಳಾತನೇಂ। ಕೃತಿಯೋ ನೋಳ್ಪೊಡೆನತ್ತು ಬಾಳ್ದು ವಲಾ ನಿಂದ್ಯಂಗಡಾ ಲೋಕದೊಳ್॥೨೦॥

ವ್ಯಾಸಂ.-ವತ್ಸಾ! ನೀಂ ಬರಿದೆ ಚಿಂತಿಪುದರಿನೇನಕ್ಕುಂ? ನಿಮಗೆಲ್ಲಂ ಹಿತಮಪ್ಪ ನುಡಿಯುಂ ನುಡಿದಪೆಂ. ಆಲಿಸು. ಸತ್ತಮುಂ ಆಡಿ ಪಾಂಡವರಂ ಅಧರ್ಮದಿಂ ಜೂಜಿನೊಳ್ ಗೆಲ್ದು ಈಗಳ್ ಕಾಡಿಂಗೆ ಅಟ್ಟಿಪ್ಪುರ್ದು ಎಂತುಂ ತಕ್ಕುದಲ್ತು.

ಧೃತರಾಷ್ಟ್ರಂ.-ಪೂಜ್ಯರೆ! ಇದು ತಗದೆಂದು ಎನತ್ತುಂ ಬಗೆಗಂ ತೋರುಗುಂ.

---

ತೇನತೇನಂ ಮೇಲೆ ಮೇಲೆ, ೧೯ ಚಿತೆ-ಚಿತಿ, ಕಡುಪಿನಿಂದ-ಶಕ್ತಿಯಿಂದ.

ವ್ಯಾಸಂ.-ಕೇಳ್; ಅವಂದಿರ್ ತಮಗೆ ಒದವಿದ ಉಪಟಳಮನೆಲ್ಲಂ ಸೈರಣೆಯಿಂ ಮನದೊಳ್ ನಿರಿಸಿ ಗುರುಗುಮ್ಮನಿರ್ದ ಪದಿಮೂರುಂ ಬರಿಸಂ ಕಳೆವುದುಂ ನಡೆತಂದು ದುರ್ಯೋಧನಾದಿಗಳಂ ಆಯೋಧನದಲ್ಲಿ ಸದೆವುದರೊಳ್ ಎಳ್ಳನಿತುಂ ಸಂದೆಗವಿಲ್ಲಂ.

ಧೃತರಾಷ್ಟ್ರಂ.-ಆನೇಗುವೆಂ ? ದುರುದುಂಬಿಗಳ್ ಎನ್ನ ಮಾತ್ರಂ ಆಲಿಸರ್.

ವ್ಯಾಸಂ.-ಪಾಪಿ ದುರ್ಯೋಧನಂ ಪೆರರ ರಾಜ್ಯಮುಮಂ ತಾನೆ ಅನುಭವಿಸವೇಳ್ಕುಮೆಂಬ ದುರಾಶೆಗೀಡಾಗಿ $ ಕರ್ಣೇಜಪರೆನಿಪ $ ಕರ್ಣಾದಿಗಳ ದುರ್ಬೋಧನೆಗೆ ಕರ್ಣಂಗೊಟ್ಟು ತಾನೀಗಳ ಕಾಡಿಂಗೆ ಪೋಗಿ ಪಾಂಡವರಂ ಕೊಲಲ್ ಉದ್ಯುಕ್ತನಾಗಿರ್ದಪಂ.

ಕಂ || ಪರಿಮಿತಿಯಿಲ್ಲದೆ ಬಯಸಿದ |
ಪರಧನನದು ಸೇರ್ದೊಡೇನೊ ಪೋ ಪಾಳ್ಗೆಯ್ಗುಂ ||
ದೊರೆದತ್ತೆನುತೆ ತೃಷಾರ್ತಂ |
ಗರಮುಮನೀಂಟಿದೊಡೆ ಕೊಲ್ಲದೇಂ ಮಾಣ್ದಪುದೇ ||೨೧||

ನೀಂ ಎಂತಾನುಂ ಆಗಾಂಪಂಗೆ ಬುದ್ಧಿವಾದಮನುಸಿರ್ದ ಉಸಿಕನೆ ಇರ್ಪವೋಲ್ ಎಸಗು. ಇವನೊರ್ಮೆ ಅವರಂ ಕೊಲಲ್ ಉಜ್ಜುಗಿಸಿ ಕಾಡಿಂಗೆ ಪೋದೊಡಂ ಕ್ರೋಧಾಗ್ನಿರೂಪರಪ್ಪ ಆ ಪಾಂಡವರ್ಗೆ ತಾನೇ ಪುರೋಡಾಶಮಪ್ಪಂ. ಸತ್ಪುರುಷನೆಂದು ಪೊಗಳ್ತೆವಡೆದ ನೀಂ ಸ್ವಜನದೊಳ್ $ ತೆಗಳ್ತೆವಡೆದು $ ನೆಗಳ್ತೆವಡೆದ ಪೊದಳ್ದ ಕುರುವಂಶಮುಂ ಅಳಿಜಸದಿಂ $ ಮುಗುಳ್ತೆವಡಿಪುದು $ ತಕ್ಕುದಲ್ತು. ಇಂದಾನುಂ ಎಂತಾನುಂ ದುರ್ಯೋಧನಂ ಮಹಾತ್ಮರ್ ಪಾಂಡವರೊಳ್ ನೇಹಂಬಳೆಯಿಪ್ಪೊಡೆ ನೀಂ ಕೃತಕೃತ್ಯನಾಪೆ. ದುರ್ಯೋಧನಾದಿಗಳುಂ

---

ಕರ್ಣೇಜಪರ್-ದುರ್ಜನರು , ೨೧ ಗರಮುಮಂ-ವಿಷವನ್ನು , ತೆಗಳ್ತೆವಡೆದು-ನಿಂದೆಯಂ ಹೊಂದಿ; ಮುಗುಳ್ತೆವಡಿಪುದು-ಮೊಗ್ಗಾಗಿಸುವುದು.

ಯುಧಿಷ್ಠಿರಾದಿಗಳುಂ ನಿನಗೆ ಸಮಾನರ. ನೀಂ ಭೇದವೆಣಿಪುದಾಗದು. ಒರ್ವರ್ಗೆ ರಾಜ್ಯಲಾಭಮುಂ ಒರ್ವರ್ಗೆ ರಾಜ್ಯಭ್ರಂಶಮುಂ ತಗದು. ಒಕ್ಕಣ್ಗೆ ಬೆಣ್ಣೆಯುಂ ಒಕ್ಕಣ್ಗೆ ಸುಣ್ಣಮುಂ ಪತ್ತಿಪರೆ?

ಧೃತರಾಷ್ಟ್ರಂ.-ಶಿವಶಿವ! ಗಾಂಧಾರಿಯಾದೊಡಂ ಆನೆ ಆದೊಡಂ ಪೊಳ್ತುಜಂ ಬಯಸಿದವರಲ್ತು. ದೈವಯೋಗದಿಂಗಡ ನಡೆದುದು. ಪಾಂಡವರ್ಗೆ ರಾಜ್ಯಭ್ರಂಶಮಾದುದಕ್ಕೆ ಆನಿರುಳುಂ ಪಗಲುಂ ಪರಿತಪಿಪೆಂ. ನನ್ನಿಯಿಂ ಚರಣಸನ್ನಿಧಿಯೊಳ್ ಬಿನ್ನವಿಪೆಂ. ಆಲಿಪುದು.

ವೃ॥ವಿನಯವಿಹೀನನೆಂದು ತಿಳಿವಿಲ್ಲದನೆಂದು ದುರಾಶನೆಂದು ವಂ।
ಚನಪಟುವೆಂದು ದುಷ್ಟಪರಿವಾರಿತನೆಂದರಿತಿರ್ಪೆನಾದೊಡಂ ॥
ತನುಭವಮೋಹಬಂಧನದೆ ಸಿಲ್ಕಿದೆನಕ್ಕಟ ಪಿಂದಿರುಂಗುಗುಂ ।
ಮನವಿದು ಬೇಗದಿಂದವನ ನೀಗುವನಾಗುವೆನೆಂದೊಡೇಗುವೆಂ ॥೨೮॥

ಅದಾರ್ಗುಮಿಲ್ಲದ ಪುತ್ರವಾತ್ಸಲ್ಯವೆಂಬ ಕರ್ಗತ್ತಲೆ ಎನ್ನಂ ಅಂತು ಕವಿಯಲ್ತಕ್ಕುದೇ ?

ವ್ಯಾಸಂ.-ಅಣುಗಾ! ಅಂತು ಪೇಳದಿರ್, ಪುತ್ರವಾತ್ಸಲ್ಯವೆಂಬುದು ಆರುಮಂ ಉಳಿಯದು. ಕೇಳ್,

ಮುನ್ನಲ್ತೆ:—

ಕಂ॥ ಉಳ್ತಪುದಿಳೆಯೊಳ್ ಕುಸಿದೆನ ।
ತೆಳ್ತೊಂದುಪಟಳದಿನೆಂದಳುಂಬಂ ಬಿಸುಸು ॥
ಯ್ದುಳ್ತಮುದುರ್ಗಿಣಿದುರುಮಂ ಕಂ ।
ಡಳ್ತಯಿನನುಗೆಯ್ದು ಸಂತ್ರವಿಟ್ಟಂ ಸುರಪಂ ॥೨೩॥
ಕಾಂತೆಯುಶಂ ದಶರಥಭೂ ।
ಕಾಂತಂ ಕಾಂತಾರಕಣುಗನೆಯ್ದುವುದುಂ ಶೋ ॥
ಕಾಂತರಿತನೆಯ್ದಿದಂ ಲೋ ।
ಕಾಂತರಮಂ ಪುತ್ರಮೋಹಮೇಂ ಕೇವಳಮೋ ॥೨೪॥

---

೭೨ ಪಿಗುವೆಂ-ಪಿನಮಾಡಲಿ, ಬಿಸುಂಸುಯ್ದುಳ್ತ - ನಿಟ್ಟುಸಿರುಬಿಟ್ಟು ಅತ್ತು, ಅಮುದುರ್ಗಣಿದುರುಮಂ-ಕಾಮಧೇನುವನ್ನು

ನೀಂ ಎಂತು ಎನಗೆ ವಾತ್ಸಲ್ಯಪಾತ್ರವೊ ಪಾಂಡುವುಮಂತೆ; ಅಂತೆನಿದುಗನುಂ. ಪಾಂಡು ಇಳೆಯೊಳ್ ಇಲ್ಲದವೂತ್ರದಿಂ ಎನಗೆ ಅವನೊಳ್ ಮರುಕಂ ಪೋಗದು. ಎಲೆ ವತ್ಸ! ನಿನಗೆ ನೂರ್ವರ್ ಮಕ್ಕಳ್; ಪಾಂಡುವಿಂಗೆ ಐವರ್. ಅವರುಂ ದುಗಡಗಡಲ ತಡಂಗುಂಡಿಯೊಳ್ ಮುಳುಂಗಿರ್ದಪರ್. ಅಕಟ!

ಕಂ॥ ನುತಿವಡೆದ ಪಾಂಡುವಿನ್ನುಂ।
ಕ್ಷಿತಿಯುಂ ಬೆಳಗುತ್ತುಮಿರ್ದೊಡಾತನ ಮಕ್ಕಳ್॥
ಚ್ಯುತರಾಜ್ಯರಾಗಿ ಬನವೆ।
ಯ್ದುತೆ ಬನ್ನಂಬಡುವ ಪಾಡು ಹಾ ಸಮನಿಕುವೇ॥೭೫

ಅವರ್ ಮುಂದೆ ಎಂತುಬಾಳ್ವರೆಂದು ಮನವೆನತು * ವೊಮ್ಮರ*ವಾತ್ಸಲ್ಯವೆಂಬ ಸೆರೆಯೊಳ್ ಸಿಲ್ಕಿ ತೊಳಲುತಿರ್ಕ್ಕುಂ. ಸುತ್ತೇಂ? ನಿನ್ನ ನಂದನರ್ ಪಲವುಂಕಾಲಂ ಪದುಳಗರೆನಿಸಿರವೇಳ್ಕುಮೆಂದು ನಿನಗೆ ಆಸೆಯಿರ್ಪೊಡೆ ನೀಂ ಎಂತಾನುಂ ದುರ್ಯೋಧನನಂ ಪಾಂಡವರೊಡನೆ ಸಖ್ಯಮನೊಡರಿಪಂತೆ ಗೆಯ್.

ಧೃತರಾಷ್ಟ್ರಂ.–ಪ್ರಾಜ್ಞರೆ! ಎನಗೆ ನೂರ್ವರ್ ಮಕ್ಕಳ್ ಇರ್ದಪರೆಂಬ ಪೆಚ್ಚುಗೆಯೇಂ? ಆಂ ಇದರ್ಕೆ ಆನಂದಿಸೆಂ. ಏಕೆನೆ ಆಲಿಪುದು–

ಕಂ॥ ಚಾರುಗುಣಾಢ್ಯನದೊರ್ವಂಕು।
ಮಾರನೆ ಸಾಲ್ಗುಂ ಪಲಂಬರೇಕವಗುಣಿಗಳ್॥
ತಾರಾಪತಿ ತಾನೊರ್ವಂ।
ವಾರಿಸುವಂ ತಮುವನನಿತುತಾರೆಗಳಪ್ಪೇಂ? ॥೭೬॥

ನಿಮ್ಮ ಆಣತಿಯುಂತೆ ಸಿದ್ಧನೆಂ. ಭೀಷ್ಮದ್ರೋಣವಿದುರಾದಿಗಳುಂ ಪಾಂಡವರೊಡನೆ ಸ್ನೇಹಮಾಗುಗೆಂದು ತವಕಂಬಡುವರ್. ಅಪ್ಪೊಡೆ ದುರ್ಲಲಿತನಪ್ಪ ದುರ್ಯೋಧನಂ ಎನ್ನ ಮಾತಿಂಗೆ ಕಿವಿಗುಡುವ

ವೊಮ್ಮರ-ಮೊಮ್ಮಕ್ಕಳ.

ನಲ್ತು. ಬರ್ವರ್ ಕಿವಿಗೊಟ್ಟೊಡಂ ಎನ್ನ ನುಡಿ ಅವಂಗೆ ನೋವನೆಸಗುಗುಂ. ಎನ್ನೊಳ್ ನಿಮಗೆ ಅನಿತು ಅನುಗ್ರಹವಿರ್ಪ್ಪೊಡೆ ನೀವೆ ದುರ್ಯೋಧನಂಗೆ ಬುದ್ಧಿವಾದಮಂ ಉಸಿರವೇಳ್ಕುಮೆಂದು ಮಣಿದು ಬೇಡಿದಪೆಂ.

ವ್ಯಾಸಂ.–ಆ ಅವಿವೇಕಿಗೆ ಬುದ್ಧಿವಾದಮಂ ಆಂ ಉಸಿರೆ ಫಲವೇನಕ್ಕುಂ? ಕೇಳ್ –

ಕಂ ‖ ನೋವೆಸಗೆ ನಿನ್ನ ಮೆಲ್ನುಡಿ |
ಯೇವುದೊ? ಜಡಮತಿಗೆಯೆನ್ನ ಬಿರುನುಡಿ ಪೋಪ್ಪೋ ‖
ಬೇವಿನರಸವಿನಿದಪ್ಪುದೆ? |
ಸೂವಿನ ತನಿರಸಮನೊಲ್ಲದಾತಂಗಿರ್ಯೊಳ್ ‖ ೨೨ ‖

ಧೃತರಾಷ್ಟ್ರಂ.–ಪೂಜ್ಯರೆ ಮಹಾನುಭಾವರಾದ ತಮ್ಮ ನಲ್ನುಡಿಯುಂ ಅವಂಗೆ ಹಿತಕರವೆಂದು ತೋರದೆ?

ವ್ಯಾಸಂ.–ವತ್ಸಾ! ಆದುರ್ಲಲಿತಂಗೆ ಎಮ್ಮನ್ನರ ನುಡಿಗಳ್ ಅದೆಂತು ಹಿತಕರವೆನಿಸುಗುಂ? ಕರ್ಣಾದಿಗಳ ನಲ್ನುಡಿಗಳ್ ಹಿತವಾಗಿತೋರುಗುಂ. ಜಗದೊಳ್ ಇದು ತಕ್ಕುದು. ಎಂತೆನೆ –ಕಾಮುಕಂವಿಲಾಸಿಪುರುಷಂಗೆ ನಟವಿಟರ್ ಅದೊಂದು $ ಕಂಚುಮಿಂಚಿನಿಂ $ ಪಾಡುವ ಬೆಡಂಗಿನ ಬಿನ್ನಣದ ಸಿಂಗರದ ನಾಯಿಕಾವಿಷಯದ ಪದಂಗಳ್ ಥಟ್ಟನೆ ಬಗೆಯನೀಳ್ಗುಮಲ್ಲದೆ ಹರಿದಾಸರ್ ಬಕುತಿಮಿಗೆ ನಲ್ದು ನರ್ತಿಸಿ ಪಾಡುವ ಸದ್ಗತಿಸಾಧನದ ಶ್ರೀಹರಿಯ ನಾಮಸಂಕೀರ್ತನದ ಪಾಡುಗಳ್ $ ಬಗೆವುಗುಗುಮೋ? $

ಧೃತರಾಷ್ಟ್ರಂ–ಪೂಜ್ಯರೆ! ಆಂ ಮಾಡವೇಳ್ಪುದೇಂ?

ವ್ಯಾಸಂ.–ಆಂ ಏವೇಳ್ವೆಂ? (ಚಿಂತಿಸಿ) ನಿನ್ನ ಮಗನಂ ಕಂಡು ಬರಿದೆ ನುಡಿಯಲ್ ಎನಗಿಷ್ಟವಿಲ್ಲಂ. ಪೂಜ್ಯರ್ ಮೈತ್ರೇಯಮಹರ್ಷಿ

---

ಕಂಚುಮಿಂಚು-ಥಳಕುಬಳಕು, ಬಗೆವುಗುಗುಮೋ–ಮನವಂಪ್ರವೇಶಿಸುವುವೇ

ಗಳ್ ಈಗಳ್ ಬಂದು ನಿನ್ನ ಅರಮನೆಯ ಮನೋರಂಜನವಿಳಾಸದೊಳ್ ನಿನ್ನ ಮಗನೊಡನೆ ಮಾತಾಡುತಿರ್ದಪರ್. ನೀನುಂ ಅವರ ಸಂದರ್ಶನಮಂ ಮಾಡಿ ಪ್ರಾರ್ಥಿಸು. ಅವರ್ ಒರ್ಮ್ಮೆ ‡ ಬಿಡಯಮನಿಡದೆ ‡ ದುರ್ಯೋಧನಂಗೆ ತಕ್ಕ ಹಿತೋಪದೇಶದ ನುಡಿಯಂ ನುಡಿವರಕ್ಕುಂ. ಇನ್ನಾಂ ತೆರಳ್ದಪೆಂ. ನಿನಗಕ್ಕೆಮ ಅಚ್ಛಿದ್ರಂ ಭದ್ರಂ. (ಎಂದು ತೆರಳ್ವಂ)

ಕಂಚುಕಿ.—ಇದೇಂ ? ವ್ಯಾಸಮಹರ್ಷಿಗಳ್ ಬಿಜಯಂಗೈವುದುಂ ಮೈತ್ರೇಯಮಹರ್ಷಿಗಳ ಸ್ವಾಗತವಿಚಾರಂ. ಇತ್ತಲ್ ಇನಿವಿರಿದು ಪೊಳ್ತು ಪೋರ್ದುದುಂ ‡ ರಿಕ್ತಟಮೆನಿಸಿತು. ‡ ಇದುವೆ ರಾಜಾಸ್ಥಾನದೊಳಿರ್ಪ್ಪ ಕಷ್ಟಂ. ಈಗಳ್ ಸಮಯಮಿಲ್ಲವೆಂದು ಪೋಗಿ ರಾಯಂಗೆ ಬಿನ್ನವಿಸಲರ್ಪ್ಪೆನೇ ? ಮೇಣ್ ಬಿನ್ನವಿಪೆಂ, "ಚೀ ಎಗ್ಗ ನಡೆ, ನೀಂ ಎಮ್ಮ ಸನ್ನಿಧಿಯೊಳ್ ಇರಲ್ ತಕ್ಕನಲ್ತು" ಎಂದು ಧೂತ್ಕರಿಪಂ. ಮೇಣ್ ಎಂತಾನುಂ ಸಮಯಮುಂ ಪೋರ್ದು ಎನಿತು ಪೊಳ್ತಂಗಾದೊಡಂ ಪೋಗಿ ಅರಿಕೆಗೆಯ್ವೆನೆ "ಎಲೆ ಪ್ರಮತ್ತ ! ಏಕಿಂತು ತಳ್ವಿದೆ ?" ಎಂದು ‡ ವಿಸಟಂಬರಿದು ‡ ದಂಡಿಪಂ. ಈಗಳ್ ಏಗೆಯ್ವೆಂ ? ಎಮ್ಮ ರಾಯಂಗೆ ಸಮಯಮೋ ದೊರೆಯದೆ ಪೋಯ್ತು ಗಡಾ. ಆಂ ಪೋಗಿ ಆತಂಗೆ ಅರಿಕೆಗೆಯ್ವನಿತರೊಳ್ ವೃದ್ಧಮಹಾರಾಜನೆ ಇಲ್ಲಿಂ ತೆರಳ್ದೊಡೆ ಇನ್ನೇಂಗೆಯ್ವುದು ?

ಧೃತರಾಷ್ಟ್ರಂ—ಎಲೆ ಪಡಿಯರನೆ ! ಮನೋರಂಜನವಿಳಾಸಕೆ ಎನ್ನಂ ಈಗಳೆ ಉಯ್ವುದು.

ಪಡಿಯರಂ.—(ಬಂದು) ಆಣತಿ , ಬಿಜಯಂಗೆಯ್ವುದು. (ಎಂದು ಆತನ ಕೈಯಂ ಪಿಡಿದುಕೊಂಡು ಪೋಪಂ)

ಕಂಚುಕಿ.—ಅಹಹ ! ಆಂ ಬಗೆದಂತೆ ವೃದ್ಧಮಹಾರಾಜನೆ ತಾಂ ಅತ್ತಣ ಬಾಗಿಲೊಳ್ ಪೊರಮಟ್ಟಂ. ಇನ್ನಿತ್ತಲ್ ಎನಗೆ ಏಗೆಯ್ಮೆ ?

---

ಬಿಡಯ-ದಾಕ್ಷಿಣ್ಯ, ರಿಕ್ತಟಂ-ವ್ಯರ್ಥ, ವಿಸಟಂಬರಿದು--ಮನಸ್ಸುಬಂದಂತೆ ಪ್ರವರ್ತಿಸಿ;

ಕರ್ಣಾದಿಪರಿವೃತನಾದ ಎಮ್ಮ ಮಹಾರಾಯಂ ಎನಗೆ ಇಂದು ಎಕ್ಕೆಕ್ಕೆಯಿಂ ಅದೇಂ ಶಿಕ್ಷೆಯುಂ ಅಮುಚ್ಚರ್ವನೋ, "ಬೆರಲೊಳ್ ಕುಳ್ಳಿರ್ದು $ಅವಲ್ಬ್ವುದು$ ಬೇಡಂ" ಎನೆ ತಪ್ಪುಗುಮೋ? ಏನಾನುಮಕ್ಕೆ. ಅನುಭವಿಸವೇಳ್ಕುಂಗಡ (ತಿರುಗಿನೋಡಿ) ಇದೇಂ ಇತ್ತಲ್ ಎಮ್ಮ ಮಹಾರಾಯನ $ಮಂತುಗಳ್$ ಕರ್ಣಾದಿಗಳ್ ಮೂವರುಂ ಝೋಂಪಿಸುತೆ ಬೆಚ್ಚಂತೆ ಬರುತಿರ್ದಪರ್.

(ಬಳಿಕೆ ಕರ್ಣಶಕುನಿದುಶ್ಶಾಸನರ್ ಪೊಗುವರ್.)

ಕಂಚುಕಿ.—ಯುವರಾಜಂಗೆ ವಿಜಯಮಕ್ಕೆ.

ದುಶ್ಶಾಸನಂ.—ಆರ್ಯವೃತ್ತ! ಇತ್ತಲ್ ಆರ್ಯಭ್ರಾತನಂ ಕಾಣಲ್ ಮಹಾರಾಜಂ ಎಯ್ತಂದನಿಲ್ಲಮೆ?

ಕಂಚುಕಿ—ಇಲ್ಲಂ. ತಕ್ಕ ಸಮಯಮಂ ಅರಿತು ಬಾರೆಂದು ಎನಗೆ ಬೆಸಸಿರ್ದಂ. ಆತು ಆಂ ಇಲ್ಲಿಗೆ ಎಯ್ತಂದು ಸಮಯಮಂ ಪಾರುತಿರ್ದೆಂ.

ದುಶ್ಶಾಸನಂ—(ಬೇಗನೆ ನೋಡಿ) ಒಳ್ಳಿತು ಆರ್ಯಭ್ರಾತನೆಲ್ಲಿ?

ಕಂಚುಕಿ—ಮೈತ್ರೇಯಮಹರ್ಷಿಗಳ್ ಬಂದಿರ್ಪರೆಂದು ಅವರಂ ಕಾಣಲ್ ಮನೋರಂಜನವಿಳಾಸಕೇಳಿಗೆ ಬಿಜಯಂಗೈದರ್.

ದುಶ್ಶಾಸನಂ.—ಛೀ ಮುತ್ತಗೂಗೆ! ನೀಂ ಏಂ ಗೆಯ್ತಮಂ ಗೆಯ್ವೆ? ಇತ್ತಲ್ ಬರ್ಪನೆ ಇರುತೆ ಸೂಳನಂ ಪ್ರಯ್ಯುತಿರ್ಪೆಯೊ? ನಡೆ; ನೀಂ ಇಲ್ಲಿಂ ಸರ್ರನೆ ಸಾರ್ದು ಆವಿಲ್ಲಿರ್ಪೆಂ ಮಹಾರಾಯಂಗೆ ಬಿನ್ನವಿಸು.

ಕಂಚುಕಿ.—ಆಣತಿ. (ಆತ್ಮಗತಂ) ಇನ್ನೇಂ ಬೆಳಗಾಯ್ತೆಂದೊಡೆ "ಅತ್ತಪೋಗಿತ್ತಪೋಗು. ಅದನೆಸಗು ಇದನೆಸಗು. ಛೀ ಥೂ ಗೂಗೆ ನಾಯ್" ಎಂತಪ್ಪ $ಪಾರಿಶಾಣಮುಮೋ$ ಎನಗಳುಂಬಂ. ಆನಿನ್ನೆಗಂ

ಅವಲ್ಬ್ವುದು—ಉಟ್ಟುವುದು, ಮಂತುಗಳ್—ಮಂತ್ರಿಗಳ್, ಪಾರಿಶಾಣಮು—ಬಳುವಾನ,

ಬರ್ದುಕಿದುದಕ್ಕೆ ಎನಗೆ ಮುತ್ತಗೂಗೆಯೆಂಬ ಬಳ್ವಸರೆ ದೊರೆತ್ತುದು. ಅವಿವೇಕಿಸಾಮ್ರಾಜ್ಯದೊಳಿರ್ಪುದು ಪ್ರಾಣಸಂಕಟಮಾತ್ರಮೆ ಅಲ್ತು. ಸ್ವರೂಪಹಾನಿಯುಮಕ್ಕುಂ. ಇಂತಪ್ಪರೊಳ್ ಪಂಗೆಯೊಡ್ಡಂ ಏಂ ಪ್ರಕಾಶವಾದಪ್ಪುದು? ಅರಮನೆಯೊಳ್ ಎನ್ನವೊಲೆ ಪಲಂ ಬರಿದಿರ್ದೊಡಂ ಅವರೆಲ್ಲರುಂ ಮೆಚ್ಚಿಗೆ. ಬರುವಂ ಮುದುಪಂ ಆನೊರ್ವನೆ ಎಲ್ಲಾಗೆಯ್ಯುತ್ತಕ್ಕಂ. ಉಣ್ಬುದಕ್ಕೆ ಉಡುವುದಕ್ಕೆ ಅಣ್ಣಪ್ಪ, ಊಳಿಗಕ್ಕೆ ದೊಣ್ಣಪ್ಪ,, ಎಂಬಂತಾದುದು ಎನ್ನ ಅವತೆ. ಮಹಾರಾಜೇಂದ್ರನ ಸನ್ನಿಧಿಯೊಳಗದವನೆಂದು ಪೆಸರ್ ಪಿರಿದು , ಕುಡುವ ವೇತನಂ ಅಶನವಸನಕೇ ಸಾಲದು "ಕಡಲ ನಂಟು, ಉಪ್ಪಿಂಗೆ ಬಡತನಂ" ಎಂಬಂತೆಗಡ ಎಮ್ಮ ಬಾಳ್ (ಎನುತೆ ಪೋಪಂ)

ಶಕುನಿ.—ಅಂಗರಾಜ ! ಪಯಣಪನ್ನಣವೆಲ್ಲಮುಂ ನೇರ್ಪಟ್ಟತ್ತಲ್ತೆ ?

ಕರ್ಣಂ—ಆರ್ಯ ! ತಡೆಯೇಂ ? ಎಲ್ಲಮುಂ ನೇರ್ಪಟ್ಟತ್ತು.

ಶಕುನಿ.—ಆದೊಡೆ ಪಯಣವೆಂದು * ತರಿಸಂದುದು. *

ಕರ್ಣಂ.—ಅದಿನ್ನುಂ ರಾಯನ ಆಳೋಚನೆಯೊಳಿರ್ದಪುದು.

ಶಕುನಿ.—ಅಂಗರಾಜ ! ಮಹಾರಾಜಂ ಅದಾವೆಡೆಗೆ ತೆರಳ್ದುದು ?

ಕರ್ಣಂ.—ಮೈತ್ರೇಯನೆಂಬಂ ಬಂದಿರ್ದಂ. ಅವಂ ನಿಮ್ಮಂ ಬರವೇಳ್ವನೆಂದು ಗುಣವರ್ಮಂ ಬಂದು ಜಗನ್ಮೋಹನವಿಳಾಸದೊಳಗೆ ದೇವಿಯು ಸನ್ನಿಧಾನದೊಳಿರ್ದ ಮಹಾರಾಜಂಗೆ ಬಿನ್ನವಿಸಿದಂಗಡ.

ದುಶ್ಯಾಸನಂ.—ಅದೇಂ ನಿಮಿತ್ತಂ ?

ಕರ್ಣಂ.—ಅದರಡಿಯನಾನರಿಯೆಂ. ಮಹಾರಾಜಂ ಬಪ್ಪುದುಂ ಅದೆಲ್ಲವುಂ ವಿದಿತವಕ್ಕುಂ.

ಶಕುನಿ—(ತಿರುಗಿನೋಡಿ) ಇದೆಕೊಳ್ಳಂ, ವತ್ಸನೀಬಂದಪಂ.

---

* ತರಿಸಂದುದು— ನಿಶ್ಚಯಿಸಲ್ಪಟ್ಟಿತು.

(ಬೞಿಕೆ ಖಿನ್ನನಪ್ಪ ದುರ್ಯೋಧನಂ ಪುಗುವಂ.)

ದುರ್ಯೋಧನಂ - (ಕರ್ಣಾದಿಗಳಂ ನೋಡಿ) ಇದೆ ! ಇತ್ತಲೆನ್ನ ಬಹಿಃ ಪ್ರಾಣಂಗಳ್. (ಕರ್ಣನಂ ಕುರಿತು) ಅಂಗರಾಜ ! ನಿಮ್ಮಂ ಅರಸುತ್ತುಂ ಆಂ ಇತ್ತಲ್ ಎಯ್ತಂದೆಂ.

ಕರ್ಣಂ.-ಮಹಾರಾಜನೆ ! ನಿನ್ನ ದರ್ಶನಕೆ ಆಂ ಮೂವರುಂ ಮೊದಲೆ ಇತ್ತಲ್ ಎಯ್ದಿ ಪಾರುತಿರ್ಪ್ಪೆವು. (ಮೊಗಮಂ ನೋಡಿ)ಇದೇಂ? ನೀಂ ಮಹಾವ್ಯಸನದಿಂ ಆಕುಳನಾಗಿರ್ಪ್ಪಂತೆ ಕಾಣ್ಬೆ ? ಹಾ !

ಕಂ ॥ ಕಂದದೆ ಕುಂದದೆ ಚೆಂದದೆ ।
ಸುಂದರವೆಂದೆನಿಪ ವದನಮಿಂದೇಕೆ ? ಪಗ ॥
ಲ್ಬಂದಿರನಂದಮನೊಂದಿತು ।
ಬಂದುದದೇನೊಂದುದಂದುಗಂ ಮಾಂದದೆ ಪೇಳ್ ॥೭೮॥

ದುರ್ಯೋಧನಂ - ಅಂಗರಾಜ ! ಅದೇವೇಳ್ದಪೆಂ? ಆಲಿಸು.

ವೃ॥ ನರನಾಚಿತ್ತದೊಳಾಸೆಯೊಂದೊಗೆವುದುಂ ನೂರ್ಚ್ಛಾಸಿರಂ ವಿಘ್ನಮಾ। ಪರಿಕುಂ ತಾಂ ಬಿಡದೆಂತು ಮುಜ್ಜುಗಿರ್ಪ್ಪುದಂ ಪೇಳ್ ಪಣ್ವದೇಂ ನನ್ನಿಯೋ ॥ ಪರಿತಾಪಂ ಬಳಿಕೇಕೆ ಭಗ್ನವೆನಿಸಿತ್ತೆನ್ನಾಸೆಯೆಂದಾವಗಂ । ಧರೆಯುಳ್ಳೇನುಮನೊಂದನಾಶಿಸದೆ ಸಂತಂ ಬಾಳ್ವನೇಂ ಧನ್ಯನೋ॥ ॥೭೯॥

ಕಂ ॥ ಇರುಳುಂ ಪಗಲುಂ ಚಿಂತಾ ।
ಭರದಿಂ ನವೆಯಿಸುವ ನೆಲದ ರಾಜ್ಯದಿನೇನ್ನೈ ॥
ಪರತರಸುಖಸಂಪದಕಾ ।
ಗರವಾವೈರಾಗ್ಯರಾಜ್ಯಮೋ ಗಡ ರಾಜ್ಯಂ ॥ ॥೮೦॥

ಕರ್ಣಂ.-ಅದೇನದೇಂ ? ಈಗಳನೆ ಎಮ್ಮ ಮನೋರಥತರು $ ಕಡಿವಡೆದುದೋ ? $

ಮಾಂದದೆ–ಪ್ರತಿಷೇಧಿಸದೆ, ಕಡಿವಡೆದುದೋ–ಛೇದವಂ ಹೊಂದಿತೋ.

ದುರ್ಯೋಧನಃ -ಅಂತಲ್ಲದೇಂ ?

ಕರ್ಣಂ.-ಅದೆಂತು ?

ದುರ್ಯೋಧನಂ.-"ಅದೆಂತು" ?ಮೈತ್ರೇಯನೆಂಬಂ ಬಂದಿರ್ದ್ದಂ.

ಕರ್ಣಂ.-ಬಂದಿರ್ದ್ದನೆಂದು ಆವುಂ ಕೇಳ್ದೆವು.

ದುರ್ಯೋಧನಂ.-" ಪಾಂಡವರ್ಗ್ಗೆ ನೀಂ* ಅರೆವೊಡವಿಯಂ* ಕುಡವೇಳ್ಕುಂ" ಎಂದು ಅವಂ ಎನಗೆ ಬೆಸಸಿದಂ.

ದುಶ್ಶಾಸನಂ.-ಹುಂ ಅದೆಂತಕ್ಕುಂ ?

ಕರ್ಣಂ.-ಆಯ್ತು. ನೀಂ ಅದರ್ಕ್ಕೆ ಏಂ ಪಡಿನುಡಿಯಂ ನುಡಿದೆ ?

ದುರ್ಯೋಧನಂ -ಆಂ ಪಗೆಗಳ್ಗೆ ಪೊಡವಿಯಂ ಕುಡುವೆನೇ ?-ಎಂದು ಎನ್ನ ತೊಡೆಯಂ ಬಗುಮಿಗೆಯಿಂ ಕೈಯಿಂ ಪೊಯ್ದೆಂ.

ಕರ್ಣಂ.-ಮಹಾರಾಜನೆ ! ಚೆನ್ನಪೊಂಗರ* ನುಡಿವ ನುಡಿಯಂ ನುಡಿದೈ , ಮೊನೆಗಾರರ ಲಕ್ಕಣವಂ ತೋರಿದೈ. ಇದು ತಗುಗುಂ. ಬಳಿಕೆ ?

ದುರ್ಯೋಧನಂ.-ಅದರ್ಕ್ಕೆ ಅವಂ ಕನಲ್ದು ಎನ್ನಂ ಮುನಿವಾರೆಪೇಳದು "ನಿನ್ನತೊಡೆಗೆ ಉಪಹತಿಯಕ್ಕೆ" ಎಂದೆನಗೆ ಶಾಪವಿತ್ತು ತೊಲಗಿದಂ.

ದುಶ್ಶಾಸನಂ.-ಮಹಾರಾಜನೆ ! ಆಚಣದೊಳ್ ಅವನಂ ಅಪರಾಧಿಸ್ಥಾನಮಂ ಪತ್ತಿಸಿ ತಕ್ಕಶಿಕ್ಷೆಯಂ ಅನುಜ್ಞೆಗೆಯ್ಯದೆ ಕೆಮ್ಮನೆಬಿಟ್ಟ ನೀನೆ ಸಹಿಷ್ಣು.

ಕರ್ಣಂ.-ನೀನುಂ ಅವನಾ ತಕ್ಕನುಡಿಗಳಿಂ ಮೂದಲಿಸಲೆ ವೇಳ್ಪುದಿರ್ದ್ದತ್ತು.

ಶಕುನಿ.-ಅಂಗರಾಜ ! ವತ್ಸಂ ಪಡಿನುಡಿಗುಡದೆ ಮೋನಮಿರ್ದ್ದುದೆ ತಕ್ಕುದು. ಎಂತೆನೆ -

---

*ಅರೆವೊಡವಿ-ಅರ್ಧಭೂಮಿ, ಚೆನ್ನಪೊಂಗರ-ವೀರರು ,

ಕಂ | ದುರುಳಂ ಬಯ್ದೊಡೆ ತಮ್ಮಂ |
ಸರಳರದರ್ಕ್ಕೆಡರೊಂದುಮಂ ಮರುಮಾತಂ ||
ಚರಣಂಗೆರ್ಚ್ಚಲೊಡಂ ನಾಯ್ |
ಮರಲ್ದು ಜನಮದರ ಚರಣಮಂ ಕರ್ಚ್ಚುಗುಮೋ ||೮೧||

ಕರ್ಣಂ—ಮಹಾರಾಜನೆ ! ಆಶಾಪಗೇಪದಿನೇನಕ್ಕುಂ? ಚಿಂತಿಸದಿರ. ಆಪಾರ್ವಂ ಪಳಿಯೆ ನಿನಗೆ ಕುಂದುಕೊರತೆಯೇಂ ?

ಕಂ || ಬೆಳ್ಳಕ್ಕರಿಗರ್ ನೆಗಳ್ದರಿ |
ವುಳ್ಳರನೇಳಿಪ್ಪೊಡಮವರ ಕಳ ಕಿಡದಿನಿತುಂ ||
ಪೆಳ್ಳಿಯುವರ್ ಮಾಣಿಕಮಂ |
ಕೊಳ್ಳದೆ ಗಾಜೆಂದೊಡದರ ಕಳೆ ಕುಂದುಗುಮೇಂ ||೮೨||

ದುರ್ಯೋಧನಂ.—ಅಂಗರಾಜ ! ಆಬರುಮಂವೈದಿಕನ ಮಾತಿಂಗೆ ಧೀರೋದಾತ್ತಂ ಆಂ ಚಿಂತಿಪೆನೇ? ಅದಂತಿರ್ಕೆ.

ಕರ್ಣಂ—ಸಕಲಜಗಚ್ಚಕ್ರವರ್ತಿಯೆನಿಪ ನಿನಗಿದು ತಕ್ಕುದು. ಆದೊಡೆ ಎಮ್ಮಾಳೋಚನೆಗೆ ಭಂಗವಿನ್ನೆತ್ತಣ್ತು ?

ದುರ್ಯೋಧನಂ.—ಅಂಗರಾಜ ! ಆಪಾರ್ವನ ದುರ್ಬೋಧನೆಗೆ ಸಿಲ್ಕಿ ಎಮ್ಮ ಮುತ್ತಗುರುಡಂ ಈಗಳ್ ಎಸಗಿದ ಎಮ್ಮ ಆಳೋಚನೆಯುಂ ಎಂತುಂ ನೇರ್ಪಡಿಸಲುಜ್ಜುಗಿಸಲಾಗದೆಂದು ಪಜ್ಜೆವಜ್ಜೆಗೆ ಪೇಳುತೆ ಎನ್ನಂ ತಡೆಗೆಯ್ಗುಂ.

ಶಕುನಿ.—ವತ್ಸಾ $ ಮುತ್ತರ $ ಸ್ವಭಾವಮೇ ಅಂತಪ್ಪುದು. ಪೇಳುತಿರ್ಕೆ. ಪೇಳ್ವರೆಗ್ಗರಾದೊಡೆ ಕೇಳ್ವರೆಗ್ಗರೇ ?

ಕರ್ಣಂ—ಮಹಾರಾಜನೆ ! ಎಮ್ಮ ಆಳೋಚನೆಯುಂ ಆಗಳ್ ಅವರೆಲ್ಲರ ಕೊಡಂಕೆಯೊಳ್ $ಬೆಚ್ಚಂ$ ಆವಂ ?

---

೮೧ ಮರಲ್ದು—ಹಿಂತಿರುಗಿ; ೮೨ ಬಳ್ಳಕ್ಕರಿಗರ್—ಮೂಢರು, ಮುತ್ತರ—ಮುದುಕರ, ಬೆಚ್ಚಂ—ಬೆಸೆದವನು.

ದುರ್ಯೋಧನಂ.—ಅದಾವತೊೞ್ತಿನ ಮಗನೋ ಅರಿಯೆಂ. ತೆಂಗಾಯೊಳ್ ನೀರ್ ಬಂದು ಬಳವುಗುವಂತೆ ಎಮ್ಮ ಆಳೋಚನೆ ಎಂತೋ ಕೆಳವನ $ ಕೊಡಕೆಯೋವರಿಯಂ $ ಪೊಕ್ಕಿರ್ಕುಂ.

ದುಶ್ಶಾಸನಂ.—ಅವಂ ಅರಿದು ಏಗೆಯ್ವಂ. ಏನಾನುಮಕ್ಕೆ ? ಆಂಗೆಯ್ವುದು ಗೆಯ್ವಲೆವೇಳ್ಪುದು.

ದುರ್ಯೋಧನಂ.—ಆ ಅರಿಗಳುಂ ಅರಿತಿರ್ದೊಡೆ ಕಾರ್ಯಸಿದ್ಧಿ ಎಂತಕ್ಕುಂ ?

ದುಶ್ಶಾಸನಂ.—ಆ ಪಂದೆಗಳ್ ಏಂಗೆಯ್ವಲಾರ್ಪರ್ ? ವೆಗ್ಗಳದ ವಳವುಂ ಬಳಕೊಂಡು ತೆರಳ್ದೊಡೆ ತಡೆಯೇನೆಮಗೆ ?

ಕರ್ಣಂ.—ಯುವರಾಜನೆ ! ಅಂತಲ್ತು. ಅವರ್ ಅಸಹಾಯರಾದೊಡಂ ಎಮ್ಮ ಆಳೋಚನೆಯುಂ ಮೊತ್ತಮೊದಲೆ ಅರಿತಿರ್ದೊಡೆ ತಾವುಂ ತಕ್ಕಾಳೋಚನೆಯುಂ ಮಾಡದೆ ಬಿಡರ್. ಬೞಿಕೆ ಎಮ್ಮ ಹರಿಬಂ ಪಣ್ವುದು ಕಷ್ಟತರವಕ್ಕುಂ.

ಶಕುನಿ.—ನನ್ನಿಯಿದು ವತ್ಸ ! ಇಂಕೆಲದಿನಂ ಮಿಣ್ಣನಿರ್ದು ಬೞಿಕ್ಕಂ ಎಕ್ಕಟಿಯೊಳ್ ಸಾಧಿಪಂ.

ದುರ್ಯೋಧನ.—ಈಗಳ್ ಎಕ್ಕಟಿಯೊಳ್ ಅಲ್ಲದೇಂ ಬಟ್ಟಬಯಲೊಳ್ ಆಳೋಚಿಸಿದೆವೇ ? ಆದೊಡಂ ಇಂತು ಬಯಲಾಯ್ತು. ದೈವಗತಿಯೆಂತಪ್ಪುದೊ ? ಬರಿದೆ ಜಗದೊಳ್ ಅಪಕೀರ್ತಿಗೆ ಆಂ ಪಕ್ಕಾದೆಂ.

ಕರ್ಣಂ.—ಆಂ ಅಂದು ಆಳೋಚಿಸುವ ಪದದೊಳ್ ಕೆಲಬಲದಲ್ಲಿ ಪೆರರ್ ಆರಿರ್ದರ್ ? $ ಬನೊರ್ಳವುಂ $ ಇರದುಗಡ. ಉಗ್ಘಡಿಸಿ ಪೇಳ್ದುದುಮಿಲ್ಲಂ. ಅದೆಂತು ಬಯಲಾಯ್ತು ?

---

ಕೊಡಕೆಯೋವರಿಯಂ—ಕಿವಿಯೊಳಭಾಗವನ್ನು, ಬನ್ನೊರ್ಳವುಂ—ಬಂದು ನೊಣವೂ;

ದುಶ್ಶಾಸನಂ.—ಕಂಚುಕಿಯೆನಿಸಿಕೊಂಡ ಮುತ್ತುಗೂಗೆಯೊಂದು ಪೊರಗೆ ಪಡಿಯ ಪುದಿಯೊಳ್ ನಿಂದಿರ್ದುದು. ಅದು ಎತ್ತಲೊ ಮುತ್ತುನೊಳ್ ಮೆತ್ತನೆ ಬಿತ್ತರಿಸಿಕ್ಕುಂ.

ಕರ್ಣಂ.—ಯುವರಾಜ! ದಲ್. ಸಮುಚಿತವೆನೆ ಬಗೆದೈ. ಇಕ್ಕುವಿಕ್ಕುಂ. ಆನುಂ ಇದಂ ಅನುಮೋದಿಸುವೆಂ.

ದುರ್ಯೋಧನಂ.—ಆದೊಡೆ ಅವನಂ ಈಗಳ್ ಕರೆಯಿಸಿ ವಿಚಾರಣೆಯಿಲ್ಲದೆ ತಕ್ಕ ಶಿಕ್ಷೆಯುಂ ಅನುಜ್ಞೆವೆಂ. ಏನಾದೊಡೇಂ? ಎಮ್ಮ ಕಜ್ಜಂ ಕೆಟ್ಟತು.

ಶಕುನಿ.—ವತ್ಸಾ! *ಈಜಂಜಡಮುಂ* ಬಿಡು. ತಕ್ಕ ಸಮಯಂ ಬಕ್ಕುಂ.

ಕರ್ಣಂ.—ಮಹಾರಾಜನೆ! ಇಂದು ಎಡರಡಸಿತೆಂದು ಎಮ್ಮ ಆಳೋಚನೆಯುಂ ನೇರ್ಪಡಿಸದೆ ಇರಲಾಗದು. ಎಂತಾನುಂ ಪಿಡಿದ ಕಜ್ಜಮುಂ ಸಾಧಿಸಲೆವೇಳ್ಕುಂ. ಕೇಳ್ —

ಕಂ॥ ಎಡರಡಸಿದೊಡಂ ಧೀರರ್।
ಬಿಡರಲ್ತೇ ತೊಡಗಿದೆಸಕಮುಂ ಫಲಿಪನ್ನಂ॥
ಕಡೆದರ್ ಬಿಸವೊಗೆದೊಡಮಿಂ।
ಗಡಲಂ ಬಿಡುಗಣ್ಣರಮುದುಗೆ ಜನಿಯಿಸುವನ್ನಂ॥೮೩॥

ದುರ್ಯೋಧನಂ—ಅಂಗರಾಜ! ಎಮ್ಮೊಳ್ ಅಗ್ಗಳದ ಜಾಣ್ಮೆ ಪೌರುಷ ಮಿರೆಯುಂ ಇಂದು ಎಮ್ಮ ಆಳೋಚನ ಕೈಗೂಡದೆ ಪೋಯ್ತು.

ಕರ್ಣಂ—ಮಹಾರಾಜನೆ! ಅದೃಷ್ಟಮಿಲ್ಲದ ಬರಿದಪ್ಪ ಜಾಣ್ಮೆಯಿಂ ಪೌರುಷದಿಂ ಏನಕ್ಕುಂ? ಆಲಿಸು.

ಕಂ॥ ಕಡಲಂ ಕಡೆದಾಗಳ್ ಹರಿ।
ಪಡೆದಂ ಸಿರಿಯುಂ ಸ್ಮರಾರಿ ಬಿಸವೊಂದಿದನೆ॥
ಲ್ಲೆಡೆಯೊಳದೃಷ್ಟಮೆ ಫಳಮುಂ।
ಕುಡುಗುಮದೇತಕ್ಕೆ ಜಾಣ್ಮೆಯುಂ ಪೌರುಷಮುಂ॥೮೪॥

---

ಜಂಜಡಮುಂ-ಚಿಂತೆಯನ್ನು, ೮೩ ಎಡರು—ವಿಘ್ನ,

ದುರ್ಯೋಧನಂ.-ಅಂಗರಾಜನೆ ! ಆದೊಡೆ ಬರಿದಪ್ಪಯತ್ನದಿಂ ಏಂ ಗಡ ?

ಕರ್ಣಂ.-ಮಹಾರಾಜನೆ ! ಚದುರಂ ಬಿಲ್ಗಾರಂ ಎಚ್ಚ ಕಣೆಯುಂ ಒಮ್ಮೆಗೆ ಗುರಿತಪ್ಪಿ ಪೋಕುಂ. ಆದೊಡೇಂ ಕೈಯ ಬಿಲ್ಲಂ ಬಿಸುಡುವನೆ ? ನೀಂ ಏಕೆ ಚಿಂತಿಸಿದಪ್ಪೆ ? ಇದಿರ್ಕ್ಕೆ. ಮುಂದಣ ಆಲೋಚನೆಯೇಂ ?

ದುರ್ಯೋಧನಂ.-ಅಂಗರಾಜ ! ರಾಕ್ಷಸಕುಲತಿಲಕನಾದ ಪ್ರಿಯ ದುರ್ವೃತ್ತನೊಡನೆ ಈಗಳಿನಿತು ಮಂತಣವಿರ್ಪ್ಪುದಿರ್ಕ್ಕುಂ. ಆದರಿಂ ತಳ್ವದೆ ಗುಪ್ತಮಂದಿರಮಂ ಸಾರ್ವೆಂ.

(ಎಂದು ನಾಲ್ವರುಂ ತೆರಳ್ದರ)

ಇಂತಿದು ದ್ವಿತೀಯಾಂಕಂ

## (ತೃತೀಯಾಂಕಂ.)

(ಬಳಿಕ ಮನೋರಮೆಯೆಂಬ ವನದೇವತೆ ಪುಗುಗುಂ)

ಮನೋರಮೆ —ಉಳ್ಕಲರ್ದ ಚೆಂದಾವರೆಗಳ ‡ ಕೊಳವೇರ್ಗಳ ‡ ಮುಸ್ತೆಗಳ ‡ ಸೌಸವದಿಂ ‡ ಮಗಮಗಿಪ ತಿಳಿಗೊಳದೊಳ್ ಇಂದು ನೀರಾಟಕೆಂದು ಬಂದ ಎನ್ನ ಮನಂ ಪುಣ್ಯಶ್ಲೋಕಂ ಯುಧಿಷ್ಠಿರ ಮಹಾರಾಜನ ಸುಗುಣಾವಳಿಯುಂ ಬಿಡವಿಡದೆ ನೆನೆನೆನಗುಂ. ಪರಿಜನ ಪರಿವೃತಂ ಆತಂ ಕೆಲವುಂಕಾಲದಿಂ ನೆಲೆಗೊಂಡು ಬನಮಂ ಬೆಳಗುತಿರ್ದಪಂ. ಆತಂ ಅದೇಂ ಮಹಾನುಭಾವನೋ; ನಿಚ್ಚಮುಂ ಬ್ರಾಹ್ಮಮುಹೂರ್ತದೊಳ್ ಎಳ್ಚತ್ತು ಭಗವನ್ಮಂಗಳನಾಮಂಗಳಂ ಪೊಗಳ್ದು ಎಳ್ದು ‡ನೊಳ್ದು‡ ಗೋಬ್ರಾಹ್ಮಣಾದಿಗಳ ಸಂದರ್ಶನಮಂ

ಕೊಳವೇರ್ಗಳ-ಲಾಮಂಚಗಳ, ಮುಸ್ತೆ-ಕೊನ್ನಾರಿಗೆಡ್ಡೆ; ಸೌಸವದಿಂ-ಪರಿಮಳದಿಂದ, ನೊಳ್ದು-ಮುಂದೆಬಂದು,

ನೆಗಳ್ದು ಮಜ್ಜನಮುಂ ತಾಳ್ದು ನಿರ್ವರ್ತಿತಶೌಚಕೃತ್ಯನಾಗಿ ಬಳ ಅಘಮರ್ಷಣಮಂತ್ರಂಗಳಂ ಪೇಳ್ದು ಮನದ ಜಂಜಡಮುಂ ತೊಳ ಮಾನದಿಯೊಳ್ \$ ಅಳ್ದು \$ ಜಳಕಂಗೆಯ್ದು ಸಂಧ್ಯೋಪಾಸ್ತಿಯ ಪೂದಳ್ದು ಬಳಿಕ ತಿಮಿಗೆ ಕಣ್ಗಳಂ ಅರೆಮುಗುಳ್ದು ಪರಮೇಶ್ವರನ ಜಾನಿಸಿ ಸಾಸಿರ್ವರ್ರಂ ಪಾರ್ವರಂ ಬಿರ್ದುಣಿಸಿನಿಂ ತಣಿಪಿ ತಮ್ಮಂ ರೊಡವೆರೆದು ತಾನುಂ ನಲ್ಮೆಯಿಂ ಆರೋಗಿಸಿದಿಂ ಬಳಿಯಂ ಮಾರಿ ಗಳ ಸತ್ಕಥಾಗೋಷ್ಠಿಯೊಳ್ ಇರ್ದು ಸದುಪದೇಶಂಗಳಂ ಆಯು ಆರಯ್ದು ಮನದೊಳ್ ಮನನಂಗೆಯ್ದು ಸೊಗದಿಂ ದಿನಂಗಳಂ ನೂ ಕುವಂ. ಆರಾಜನ್ಯಶಿರೋಮಣಿ ಕಷ್ಟಕಾಲದೊಳಂ ತನ್ನ ಧರ್ಮ ಮಾರ್ಗಮುಂ ಗೆರೆಯನಿತುಂ ಕೈಗಣ್ಮಿ ನಡೆಯನಲ್ತೆ. ಇದು ಸಜ್ಜ ಕುಲತಿಲಕಂಗೆ ಆತಂಗೆ ಸಾಜಮೆ. ಎಂತೆನೆ —

ಕಂ ‖ ದಂದುಗಮೊಂದಿದೊಡೇಂ ಸ ।
ದ್ವಾಂಶಂ ನಿಜಧರ್ಮಮಾರ್ಗಮುಂ ಬಿಡದೆಂದುಂ ‖
ಚಂದನಕಾಷ್ಠಂ ತೇದೊಡ ।
ಮೊಂದೇಪರಿಯಿಂದೆ ಬೀರದೇ ಪರಿಮಳಮುಂ ‖ ೮೫ ‖

ಆರಾಜಪರಮೇಶ್ವರಂಗೆ ಈಬನಮುಂ ಪೊಳಲಂತೆಯೆ ಇರ್ಪ್ಪಂ ಆತಂ ಆದೆಂದಿಂಗೆ ತನತು ಅರಸುತನಮುಂ ಕೈಕೊಂಡು ತನ್ನ ರಾಜ ಧಾನಿಯುಂ ತನ್ನ ನೆಲೆಯಿಂ ಸಾರ್ಥತೆಗೊಳಿಪನೋ ಎಂದು \$ ದಿಮ್ಮಿದ ರೆಲ್ಲರುಂ \$ ದಿಮ್ಮನೆ ಹಮ್ಮೈಸುತಿರ್ದಪರ್. ಇದು ತಗುಗುಂ. ದೊಡಂ ಆರಾಜಕುಲಮಾರ್ತಾಂಡಂ ಎಡೆವಿಡದೆ ಇಲ್ಲಿಯೆ \$ಇಕ್ಕೆ ಎಂದು ವನದೇವಿಯರ್ ಆಂ ಬೇಳ್ಪೆವು. ಏಕೆನೆ –ಸುಚರಿತಪ್ರಾತ ಆತಂ ಈಬನಮುಂ ಪೊಕ್ಕಂದಿನಿಂ ಅಳರಕ್ಕಸರ ಉಪಟಳವೆಂಬುದ ಎಮಗೆ ಇಲ್ಲಂ. ಆತನ ಸನ್ನಿಧಾನವಿಶೇಷದಿಂ ಎಲ್ಲರುಂ ನಣ್ಪುಗೊಂಡ ಆತಂಗೆ ಪರಮೇಶ್ವರನ ಅನುಗ್ರಹದಿಂ ವಿಜಯಾಭ್ಯುದಯಾಪ್ತಿ ಆಗುಗೆಂದು ಮಂಗಳಾಶಾಸನಮುಂ ಆನುಗೊಳಿಸುತಿರ್ದಪೆವು.

---

ಅಳ್ದು–ಮುಳುಗಿ, ದಿಮ್ಮಿದರ್–ದೊಡ್ಡವರು, ಇಕ್ಕೆ–ಇರಲಿ.

ಅಹಹ ! ಇದಲ್ತೆ ಅಭಿನಂದನೀಯಂ — ಆತನ ತಮ್ಮಂದಿರ್ ನಾಲ್ವರುಂ ಆತನಂ ತಂದೆಗೆತ್ತು ಭಕ್ತಿಮಿಗೆ ಸೇವಿಸುತ್ತಿರ್ದ್ದಪರ್. ಆತನುಸಿರ್ದುದನೇನುಮಂ ಸಿರದೊಳಾಂಪರ್. ಪುರುಷೋತ್ತಮನಪ್ಪ ಆರಾಜೇಂದ್ರಪುಮಾಳಿಗೆ ಆನಾಲ್ವರುಂ ನಾಲ್ದೋಳ್ಗಳಂತೆ ಕಣ್ಗೊಳ್ಗುಂ. ಜಗದೊಳ್ ಒಡವುಟ್ಟಿದರ್ ಬಳಿಯುತ್ತಿಪ್ಪರ್ಗಳ್ ಪಣದಾಸೆಗೀಡಾಗಿ ಒರೊರ್ವರ್ಗ್ಗೆ ಒರೊರ್ವರ್ ಮಚ್ಚರಿಸುತೆ ಪಗೆಗುಂ. ರಾಜ್ಯಕೋಶಂಗಳಂ ಪಗೆಗಿತ್ತು ಬನಂಬೊಕ್ಕು ಕಷ್ಟಂಬಡುತಿಪ್ಪರ್ಗಳುಂ ಬೆಂಗೊಂಡು ತಾಳ್ಮೆಗೊಂಡು ಬೇಸರದೆ ಒರ್ಚ್ಚಣಮುಂ ಅಗಲದೆ ‡ ಅಗಲ್ದಬಗೆಯ ‡ ನಲ್ವಗೆಯಿಂ ‡ ತಮ್ಮಣ್ಣನ ಬೆಸನಂ ಪಾರುತಿರ್ದ್ದಪರ್. ಇಂತಪ್ಪ ‡ಸೌಭ್ರಾತ್ರಂ‡ ಕೇವಳಮೋ? ಜನ್ಮಾಂತರಸುಕೃತವಿಶೇಷವಿಲ್ಲದೆ ದೊರೆಗುಮೋ ? ಆಃ ಅವರ್ ಅದೇಂ ಧನ್ಯರೋ, ಅದೇಂ ಮಾನ್ಯರೋ, ಅದೇಂವದಾನ್ಯರೋ. ಇದುವು ಮಿಕ್ಕರ್. ಆ ಮಾಹದಿ ಬದೆಯುಂ ಏಪೊಗಳ್ವೆಂ? ವನವಾಸವೊದವಿದಾಗಳುಂ ತನ್ನ ಭರ್ತಾರರ ಛಂದಾನುವರ್ತಿನಿಯಾಗಿ ಕನಲದೆ ಬೇಸರದೆ ತೆಗಳದೆ ಮುದುಡಗೆ ಮೋಡಿಗೊಳ್ಳದೆ ‡ ಮುರಿಮುರಿಯದೆ ‡ ಮೂದಲಿಸದೆ ‡ ಕೊರಚಾಡದೆ ‡ ಪಿಸುಣಾಡದೆ ಗೊಣಗದೆ ಇದಿರ್ನುಡಿಯುಂ ಆಡದೆ ಒಸೆದು ಬಕುತಿಮಿಗೆ ತಾಂ ಬಗುಮಿಗೆಯಿಂ ಸೇವಿಸುತ್ತಿರ್ದ್ದಪಳ್. ಆನುಂ ಪೆಣ್ಣೊಂದು ಪುಟ್ಟಿದೊಡೆ ಬಂದುದೇ ? ಬರಿದೆ ಚಕಚಕನೆ ಚಾಕಚಕ್ಯದಿಂ ನುಡಿಯಾಡುತುಂ ಪೆರರಂ ಪಿಸುಣಾಡುತುಂ ಜೀವಿತಕಾಲಮಂ ನೂಂಕಿದೊಡಾಯ್ತೇ ? ದ್ರೌಪದಿಯು ಲೋಕೋತ್ತರವಪ್ಪ ಗುಣಗಣದೊಳ್ ಬಂದಾನುಂ ಸಮನಿಕುಮೋ? ಪತಿಗೊದವಿದ ‡ ಎಡರಂ ‡ ಲೆಕ್ಕಿಸದೆ ಬಗೆಯೊಳ್ ಬಗೆಯದೆ ಪುಬ್ಬುಗಂಟಿಡುತುಂ ‡ ಉರುಗಿ ‡ ನೋಡುತುಂ ಮಾಂಕರಿಸಿ ತನಗೆ ಬೇಳ್ಪ ಉಡುಗೆದುಡುಗೆಗಳ್ಗೆ ಇರುಳುಂ

---

ಅಗಲ್ದಬಗೆಯ—ವಿಶಾಲವಾದ ಮನಸ್ಸಿನ, ನಲ್ವಗೆಯಿಂ—ಸದಭಿಪ್ರಾಯದಿಂದ, ಸೌಭ್ರಾತ್ರಂ—ಒಳ್ಳೆಯ ಒಡಹುಟ್ಟು, ಮುರಿಮುರಿಯದೆ—ವಕ್ರವಕ್ರತೆಯಿಂದಿರದೆ, ಕೊರಚಾಡದೆ—ಮರ್ಮೋದ್ಘಾಟನವಚನವಂ ಆಡದೆ, ಎಡರು—ಕಷ್ಟವನ್ನು, ಉರುಗಿ—ವಕ್ರತೆಯಿಂ ಕೂಡಿ,

ಪಗಲುಂ ಚುನ್ನವಾಡುವ ಪೆಣ್ಗಳ್ ಪಲಸಾಸಿರಂ. ದ್ರೌಪದಿಯಂತೆ ಕಿಡುದಸೆಯೊಳಂ ಪತಿಮನೋನುವರ್ತಿನಿಯರಾಗಿ ಜಗದ ತೊಡಂಗಳೆಂದೆನಿಸಿ ಪೆಸರ್ವಡೆವುದು ಸತ್ಕುಲೀನೆಯರ ಅಸಾಧಾರಣೆಯರ್ ಮಾನನಿಯರ್ಗಲ್ಲ ಸರ್ವಸಾಮಾನ್ಯಮೋ? ಪೆೞತೊಂದಿದುವುಂ ಅಭಿನಂದನೀಯಮಾದುದು. ಎಡರಡಸಿದಾಗಳುಂ ಅಡವಿಯೊಳ್ ಎಡೆವಿಡದೆ ಶಿಷ್ಯರ್ಗೆ ಹಿತಮನ ಹಾರೈಸುತ್ತುಂ ಪಲತೆರದೆ ಪದುಳಂಗೆಯ್ವುತಿರ್ಪ ಪುರೋಹಿತರೆನಿಸಿದಾ ಧೌಮ್ಯರ್ ಏಂ ಸೌಮ್ಯರೋ, ಅದೇಂ ಸ್ವಭಾವರಮ್ಯರೋ, ಅದೇಂ ಅಸಾಮ್ಯರೋ ಅದೇಂ ಪ್ರಣಮ್ಯರೋ. ಇಂದೆ ಸುದಿನಂ; ಅವಂದಿರ ಗುಣಸಂಕೀರ್ತನದಿಂ ಆಂ ಧನ್ಯೆಯಾದೆಂ.

(ತೆರೆಯಲ್ಲಿ) ಮನೋರಮೆ ! ಮನೋರಮೆ ! !

ಮನೋರಮೆ –(ಕೇಳ್ದು) ಅದಾರ್ ಎನ್ನಂ ಇಂತು ಕರೆವರ್? (ನೋಡಿ) ಆಃ ! * ಎನ್ನೊಡನಾಡಿ * ನಳಿನಿ ನೀರೊಳ್ ಎನ್ನೊಡನಾಡಿ ಬಿನದಂ ಬಡಲೆಂದು ತಾಂ ಓಡಿ ಬರುತಿರ್ಕ್ಕುಂ. (ನಾಡೆನೋಡಿ) ಇವಳ್ಗೆ ಅದೇಕೆ ಇನಿತೊಂದು * ಕಾವರೆ ? *

(ಬೞಕೆ ನಳಿನಿ ಪುಗುಗುಂ.)

ನಳಿನಿ.–ಮನೋರಮೆ ! ಮನೋರಮೆ !!

ಮನೋರಮೆ.–ನಳಿನಿ ! ಇದೇಂ ಇನಿತೊಂದು ಕಾವರೆ ?

ನಳಿನಿ.–ಮನೋರಮೆ ! ನಿಟ್ಟುಸಿರಿಂ ತಳ್ಪೊಯ್ವ ಎನ್ನ ಎರ್ದೆ ಈಗಳ್ ದಲ್ ನಿನ್ನ * ಕಾಣ್ಕೆಯಿಂ * ನಿರಾಕುಳವಾದತ್ತು.

ಮನೋರಮೆ –ಅದೇಂ ಇಂತು ಪೇಳ್ದಪೈ? ಎತ್ತಾನುಮಂಜಿದೆಯೋ ?

ನಳಿನಿ.–ಅಂತಲ್ಲದೇಂ ?

ಮನೋರಮೆ.–ಅದೆಂತು ದೇವತೆಗಳ್ಗೆ ಎಮಗಂ ಬನದೊಳಂಜಿಕೆ?

---

ಒಡನಾಡಿ–ಸ್ನೇಹಿತೆ, ಕಾವರೆ–ಸಂಭ್ರಮಂ, ಕಾಣ್ಕೆಯಿಂ–ದರ್ಶನದಿಂದ,

ನಳಿನಿ.-ಇದೊಂದು ಅಪೂರ್ವವಪ್ಪ ಅಂಜಿಕೆಗಡ ಇಂದು ಎನಗೆ ಬದವಿದತ್ತು.

ಮನೋರಮೆ.-ಅದೇಂ? ಪೇಳಪೇಳ.

ನಳಿನಿ.-ನೀಂ ಇಲ್ಲಿಗೆ ಕದಂಬಾರಾಮದಿಂ ಪೊರಮಡುವುದುಂ ಆನುಂ ನಿನ್ನ ಬೆನ್ನನೆ ಬಂದೆಂ.

ಮನೋರಮೆ.-ಅಪ್ಪುದು ಬಲ್ಲೆಂ.

ನಳಿನಿ.-ಆದೊಡೆ ನೀಂ ಎನ್ನಂ $ ಪೆಡಮಗುಳ್ದು $ ನೋಡದೆ ನಿಟ್ಟೋಟಂಗೊಂಡೆ.

ಮನೋರಮೆ.-ನಳಿನಿ! ಇಲ್ಲಂ. ಆನುಂ ಸಾಜಮಪ್ಪ ನಡೆಯಿಂದಮೆ ಬಂದೆಂ. ಆಯ್ತು ಬಳಿಕ್ಕೆ?

ನಳಿನಿ.-ಬಳಿಕ್ಕೆ ಆನೊರ್ವಳ್ ಇತ್ತಲ್ $ ಗೆಂಟನೊಳ್ $ ಬರುತ್ತುಮಿರ್ದೆಂ. ಮುನಿಯೊರ್ವಂ ಕಣ್ಗೆವಂದಂ.

ಮನೋರಮೆ.-ಮುನಿದರ್ಶನದಿಂ ನೀಂ ಧನ್ಯೆಯಾದೈ. ಅಂಜಿಕೆಯದೆತ್ತಣ್ತು?

ನಳಿನಿ.-ಅವಂ ಅದೆಂತಪ್ಪಮುನಿ, ಪಾಳ್ಮುನಿ. ಆಮುನಿಯ ನಡೆವಳಿಯುಂ ಕಂಡೊಡೆ ಅದಾರ್ ಮುನಿಯರ್?

ಮನೋರಮೆ.-ಅದೇಕೆ ಇಂತು ಮುನಿದು ಮುನಿಯುಂ ಪಳಿದಪೆ? ಅದೇಂ ಸಂಗತಿ? ನಿರವಿಸ.

ನಳಿನಿ.-ಸಖಿ! ಕೇಳ್. ಅವಂ ಮುನಿಯಲ್ತು; ನೋಡಲ್ಕೆ ಮುನಿಯಂತಿರ್ಪ್ಪಂ. ಎನಗೆ ತೋರುಗುಂ—ಅವನೊರ್ವಂ ಮಾಯಾವಿ ದುರುಳಂ.

ಮನೋರಮೆ.-ನಳಿನಿ! ಅದೆಂತು? ಪೇಳ.

---

ಪೆಡಮಗುಳ್ದು-ಹಿಂದಿರುಗಿ, ಗೆಂಟನೊಳ್-ಸಮೀಪದಲ್ಲಿಯೆ.

ನಳಿನಿ.-ಆದೊಡೆ ಕೇಳ್. ಅವಂ ಎನ್ನಂ ಕಂಡು ಮೊತ್ತಮೊದಲ್ ನಾಚದಿಂ ಮಾತನಾಡಿದಂ.

ಮನೋರಮೆ.-ಬಳಿಕೆ ಬಳಿಕೆ ?

ನಳಿನಿ.-ಬಳಿಕೆ ತುತ್ತತುದಿಗೆ ಕೊಂಕುನುಡಿಗಳಿಂ ಮನಮಂ ಕದಬುಗೊಳಿಸಿದಂ.

ಮನೋರಮೆ.-ಆಯ್ತು; ನಳಿನಿ ! ಬಳಿಯಂ ?

ನಳಿನಿ.-ಬಳಿಯುಮೇ ? ಆಂ ಮರುನುಡಿಯುಂ ನುಡಿಯದೆ ಸರ್ರನೆ ಮುಂತಣ್ಗೆ ಪಜ್ಜೆಯಿಟ್ಟೆಂ.

ಮನೋರಮೆ.-ಬಳಿಕೆ ಬಳಿಕೆ ?

ನಳಿನಿ.-ಬಳಿಕಮೇಂ ? ಅವಂ ಪಜ್ಜೆವಜ್ಜೆಗೆ ಬೆನ್ನನೆ ಬರುತುಂ ಎನತ್ತು ಕೊರಲೊಳ್ ತನತ್ತು ನಿಡುಗೆಯ್ಯಿಂ ಸಾರ್ಚಲ್ ತೊಡಗಿದಂ.

ಮನೋರಮೆ.-ಛೀ! ಪಾಪಿ ಎಂತಪ್ಪ‡ ಕಾಳ್ಗಯ್ತಮಂ‡ಗೆಯ್ದಂ! ಆಯ್ತು; ನಳಿನಿ! ಬಳಿಕ್ಕಂ ನೀಂ ಏಂಗೈದೆ ?

ನಳಿನಿ.-ಸಖಿ ! ಪೆಣ್ಗಳ್ ಇನ್ನೇಂ ಗೈಗುಂ ? ಆಂ ‡ ಬಿಗುರ್ತು ‡ ಕಿಟಾರನೆ ಕಿರುಚಿ ಬಯ್ಕನೆ ನುಣ್ಚಿಕೊಂಡು " ಛೀ ದುರುಳ ! ತೊಲಗು " ಎಂದು ಘೂತ್ಕರಿಸಿ ಪಿಂದಿರುಗಿ ನೋಡದೆ ದೆಸೆಗೆಟ್ಟು ನಿನ್ನೆಡೆಗೆ ಓಡಿಬಂದೆಂ.

ಮನೋರಮೆ.-ನಳಿನಿ! ಆದೊಡೆ ನೀನೆ ಧೀರೆ. ಬಳ್ಳಿತನೆ ಗೆಯ್ದೈ. ಪರಸ್ತ್ರೀಕಾಮುಕಂ ಅವಂ ತಳ್ವದೆ ಕಿಡುಗುಂ. ನೀಂ ಏಕೆ ಚಿಂತಿಸಿದಪೆ ? ಈ ಬನದೊಳ್ ಎಂದುಮಿಲ್ಲದ ಸುದ್ದಿಯುಂ ಕೇಳ್ವ ಎನ್ನ ಎರ್ದೆ ಕದಕ್ಕದಿಸುಗುಂ.

ನಳಿನಿ.-ಮನೋರಮೆ ! ಇಂದು ಇನ್ನಿತ್ತಲ್ ಆಟಪಾಟವೇನುಂ ವೇಡಂ. ಇಲ್ಲಿ ನಿಲ್ವುದು ಎಮಗೆ ತರನಲ್ತು. ಮೞಕ್ಕನೆ ನಡೆ; ಎಮ್ಮೊಡೆಯಂ ಸೇರ್ದು ನಿರಾಳಂಗೊಂಡು ಸಲ್ಲಪಿಸುವಂ.

---

ಕಾಳ್ಗಯ್ತಮಂ-ಕೆಟ್ಟಕೆಲಸವನ್ನು. ಬಿಗುರ್ತು-ಭಯಪಟ್ಟು.

(ಎಂದಿರ್ವರುಂ ತೆರಳ್ದರ್)

— ಇಂತಿದು ವಿಷ್ಕಂಭಕಂ —

(ಬಳಿಕ್ಕೆ ಮುನಿವೇಷಧಾರಿಯಪ್ಪ ದುರ್ವೃತ್ತನೆಂಬ ರಕ್ಕಸಂ ಪುಗುವಂ)

ದುರ್ವೃತ್ತಂ-ಇಂದು ದೈವಯೋಗದಿಂದೆ ಕಳ್ಳನೆ ದಾರಿಯೊಳ್ ಕಂಡ ಆಪುಂಡರೀಕವದನೆಯೆಲ್ಲಿ ಯೆಲ್ಲಿ? ? ಆಕುಂದರದನದ ಸುಂದರಿ; ಆಯಿಂದುಮುಖದ ಇಂದೀವರಾಕ್ಷಿ; ಆಮುಂದಗಮನದ ಮಂಗಳಾಂಗಿ; ಆಕನ್ನೈದಿಲ ಕರ್ಣಿಕೆಯ ಕನ್ನವುರದ ಕನ್ನೆಮಣಿ; ಆಪ್ಸರಾಪ್ರವಿದಿಗಂ ಮಿಗಿಲೆನಿಪ ಸೊಬಗಿನ ಸೌಭಾಗ್ಯವತಿ. ಸಂಚುಗೆಯ್ದಾಡಂ ಎತ್ತ ಮುಂಚಿಪೋದಳೋ ? ಮಿಂಚಿನಂತೆ ಪಳಚ್ಚನೆ ಪಳಂಚಿ ಮಿಂಚುತಿರ್ದ ಆಚಂಚಲಾಕ್ಷಿ ಕಂಚುಮಿಂಚುಮಾಡಿ ಬಂಚಿಸಿ ಹೊಂಚು ಕೊಂಡಳ್. ಆಪೊನಪುಗಾರ್ತಿ ಆವಳೋ ತಿಳಿಯೆಂ. ಘಲ್‌ಘಲ್ಲನೆ ಪಜ್ಜೆಯಿಟ್ಟ ಆಕೆಯ ಪಜ್ಜಳಿಪ ಬಜ್ಜರದ ಜಾಗವಡಲ ಮಾಣಿಕದ ಕಾಲ್ಗಳಲ್ಗಳ ಕಿಸುವೊನ್ನ ಕಿರುಗೆಜ್ಜೆಗಳ ಝುಣಝುಣತ್ಕಾರಂ ಇನ್ನುಂ ಕೊಡಂಕೆಯುಂ ಝೊಂಪಿಸುಗುಂ. ಆಕೆಯ ಕಡೆಗಣ್ಣಸರಲ್ ತಾಂಗಲೊಡಂ ಎನತ್ತುಮನಂ ಜಗ್ಗನೆ ಜರ್ಜರಿತವಾದುದು. ಅಕಟ! ಚೀಃ ಮನುಮುತಚೆನ್ನಪೊಂಗನ ಚಲಿಪ ಪಳಯಿಗೆಯೆಂಬಿನಂ ಮಿಸುಪ ಆಚೆಲ್ಲಗಾರ್ತಿಯ ಚೆದರಿದ ಚೇಲಾಂಚಲಮುಂ ಚದುರಿಂ ಚೆಕ್ಕನೆ ಪಿಡಿದು ಈಳ್ದು, ಚೆಚ್ಚರಂ ಚೇತನರ ಚೇತಮುಂ ಚೆಲ್ಲಾಡಿ ಚೆಲಪಿಲಿಗೆಯ್ವ ಆಚೆನ್ನೆಯ ಚೆಲ್ವಿನ ಚೆಂದುಟಿಯ ಚಿನಿರಸಮುಂ ಚೆಲ್ಲದಿಂ ಚೆನ್ನನೆ ಚೆಪ್ಪರಿಸಿ ಈಂಟದೆ ಬಾಂಬನಾದೆಂ. ಪೂಸರನ ಶರವಿಸರದ ಇಸುಗೆಯ ಸೂಡಿಂ ಕುದಿಕುದಿವ ಎನ್ನಂ ಉಳದು ಕಳ್ಳನೆ ಮೆಯ್ಗರೆದಳ್ ಸೌಭಾಗ್ಯೋದಂಚಿತವಿಶಾಲಫಾಲೆ ರಮಣೀಯಲೀಲೆ ವಿಲಾಸಿಜನಾನುಕೂಲೆ ಕನಕೋಪಮಾನತನುಲತಾಕನತ್ಕಮನೀಯದುಕೂಲೆ ವಿರಾಜದ್ವಿವಿಧವಿಚಿತ್ರವಿಭೂಷಣಜಾಲೆ ಲಸದಧರಾಧರೀಕೃತ

---

ಕನ್ನವುರದ-ಕರ್ಣಪೂರದ, ಪೊನಪುಗಾರ್ತಿ-ವಿಲಾಸಿನಿ, ಜಾಗವಡಲ-ಪಚ್ಚೆಯ, ಕಾಲ್ಗಳಲ್ಗಳ-ಕಾಲಂದುಗೆಗಳ, ಕೊಡಂಕೆಯುಂ-ಕಿವಿಯನ್ನು, ಬಾಂಬಂ-ಮೂಢ.

ನವಪ್ರವಾಲೆ ಗಂಭೀರಶೀಲೆ ಮದನಮೋಹನಶರಮಾಲೆ ಶೃಂಗಾರ ರಸವೇಲೆ ಶ್ರೀಲೆ ಆಬಾಲೆ. ಅರರೆ! ಅದೆಂತು ಸರಕ್ಕನೆ ಕಂಚು ಮಿಂಚು ಮೂಡಿ ಎನ್ನಮನದ ಸರ್ವಸ್ವಮಂ ಕವರ್ದು $ ಕೋಳ್ ಗೊಂಡಳ್?

ಕಂ‖ ಮನ್ನಯನಕುಮುದಕೌಮುದಿ।
ಕನ್ನೆಯವಳ್ ಮಿಂಚುವೋಲಡಂಗಿದಳೆತ್ತಲ್ ‖ (ಬಗೆದು)
ತನ್ನಂ ಬಯ್ತಡಲೆಂದಿರ।
ದೆನ್ನಯಮನಮೆಂಬ ಮನೆಯನೇ ಪೊಕ್ಕಿರ್ಕುಂ ‖೮೬‖

ಆಯ್ತು ಪೋಯ್ತು. ಇನ್ನವಳ ವಿಚಾರದಿನೇಂ ಫಳಂ? ಇಂದು ಆವಳ ಕಾಣ್ಕೆಯೊಂದೇ ಎನಗದೊಂದು ಕಾಣ್ಕೆ. ನರಲೋಕದಲ್ಲಳಂ ರಾಯಕೋಳಾಹಳಂ ಕುರುಕುಲಚೂಡಾಮಣಿ ಶ್ರೀಮನ್ಮಹಾರಾಜ ದುರ್ಯೋಧನರಾಜೇಂದ್ರಸಾರ್ವಭೌಮಂ ಎನಗೆ ಇಂತು ಆಣತಿಯಿತ್ತಿರ್ಕುಂ. ಎಂತೆನೆ—

"ಎಲೆ ದುರ್ವೃತ್ತ! ನೀಂ ಇಲ್ಲಿಂ ತಳರ್ದು ಮನದೊಳ್ ಅಲರ್ದು ಪಾಂಡವರಿರ್ಪ ಬನಮಂ ಸಾರ್ದು ಬೇರೆರೂಪಿಂ ಅಳುರ್ದು ಪಾಂಡವರ ಬಳಿಯೊಳ್ ಇರುತಿರ್ದು ತಕ್ಕವಸರಮಂ ಪಾರ್ದು ಬಿಡದೆ ಅಸುರ್ದು $ ಕೆಳರ್ದು $ ಪೋರ್ದು $ ಪೊಂಜುರಿಗೆಯಿಂ ನೇರ್ದು $ ಸಂತಸದಿಂ $ ಆರ್ದು $ ನೆತ್ತರಂ ಬರೆಪೀರ್ದು ಬಿಜಯದಿಂ ಪೊಡರ್ದು ಮರಲ್ದು ಬಳಸಾರ" ಎಂದು. ಅದರಿಂ ಮಹಾಪ್ರಭುವಿನ ಆಣತಿಯಂತೆ ಸಾಜವಪ್ಪ ಕಕ್ಕಸಮಂ ರಕ್ಕಸವರಿಜಂ ಕಳೆದು ಪೊಸತಪ್ಪ ರಿಸಿವರಿಜಂ ತಳೆದು ಈ ಬನಮಂ ಪೊಕ್ಕೆಂ. ಪೊಕ್ಕೆನಗೆ ಪಲವುಂ ಕಾಲಂ ಕಳೆದತ್ತು. ಕಳೆದೊಡಂ ತಕ್ಕವಸರಂ ಎನಗೆ ದೊರೆತುದಿಲ್ಲಂ. ಎನಗಾದೊಡೆ ಆ ದ್ರೌಪದಿಯ ಮೇಲಣ ಆಸೆಯೆ ಬೆಟ್ಟಿತಾಗಿರ್ಕುಂ.

---

ಕೋಳ್—ಕೊಳ್ಳು, ಕೆಳರ್ದು—ವಿಜೃಂಭಿಸಿ, ಪೊಂಜುರಿಗೆಯಿಂ—ಚಿನ್ನದ ಕತ್ತಿಯಿಂದ ನೇರ್ದು—ಛೇದಿಸಿ, ಆರ್ದು—ಗಟ್ಟಿಯಾಗಿ ಕೂಗಿ.

(ತೆರೆಯಲ್ಲಿ) ಸಖಿಯರಿರಾ! ಬೇಗದೆ ಬರ್ಪ್ಪುದು; ನಾಡೆ ಅರಲ್ದು ಕೆಳಗೆ ಉದಿರದಮುನ್ನಮೆ ಪುದಿದ ಪೂಗಳಂ ಕೊಯ್ವಂ.

ಸಖಿಯರ್.—ಈಬಂದೆವೀಬಂದೆವು.

ದುರ್ವೃತ್ತಂ.—(ಕೇಳ್ದು)ಇದಾರ್ತುರ್ ಕಲಮಂಗಳವಾಣಿ? ಕಲಮಂಗಳಂ ಎರಗುವ ಸಾರಿಗೆಗಳ ಕಲವಾಣಿಯುಂ ಪೋಲ್ಗುಂ. (ನಾಡೆ ನೋಡಿ) ಆರುಮಲ್ತು; ಪಾಂಡವರರಸಿ ದ್ರೌಪದಿ ಮುಡಿಗಿಟ್ಟ ತೆಳ್ದುಗುಲದ $ ಅರೆಝುಳಂಬದಿಂ $ ಬಳ್ಪೊತೆ ಝುಂಗರ್ಝುಗಿಪ ರನ್ನಗೆಯ್ವಳ್ ಘಲ್ಘಲ್ ಘಲ್ಲೆನೆ ಬೆಳ್ಳನೆ ಮಿಸುಪ ಸೆಳ್ಳುಗುರ್ಗಳಿಂ ನಿರಿಗುರುಳ್ಗಳಂ ಸಾವಗಿಸುತೆ, ಬಡನಡು ಬಳ್ಕೆ $ ಪಿಡಿವ್ರೋಲ್ $ ಬಯ್ಯಾರದಿಂ ಅಡಿಯಿಡುತೆ ಕಣ್ಗಳ ಕುಡುನೋಟದಿಂ ಕರ್ನೆಯ್ದಿಲ ಬೆಳಗಂ ಆಗಿಸುತೆ ತನ್ನ ಕೆಳದಿಯರ ಪ್ಪರಿಸಿಗುವರಿಯರೊಡನೆ ಈಬಂದಪಳೀಬಂದಪಳ್ (ಮತ್ತಂ ಮತ್ತಂ ನೋಡಿ)ಅಹಹ! ಏಂ ರೂಪು! ಏಂ ಲಾವಣ್ಯಂ! ಏಂ ತಾರುಣ್ಯಂ! ನೋಡೆ ಅಗಣ್ಯಮಾಗಿರ್ದಪುದು. ಈಕೆಯುಂ ಏವಣ್ಣಪೆಂ. ಈನಿರಿಗುರುಳ್ಗಳ್ ಈಸೋರ್ಮುಡಿ ಈ ಬೆರೆನೊಸಲ್ ಈ ಕುಡುಪುರ್ಬು ಈ ನಿಡುಗಣ್ ಈಸವಿನೋಟಂ ಈ ತೆಳ್ಗದಂಪು ಈಚೆಂದುಟಿ ಈಬಳ್ನಡು ಈ ನಳಿದೋಳ್ ಈ ಕೆಂದಳಂ ಈ ಸೆಳ್ಳುಗುರ್ ಈ ಬಟ್ಟದೊಡೆ ಈ ದಟ್ಟಡಿ ನೋಟಕರ ಮನಮಂ ಇಕ್ಕುಳಗೊಳ್ಗುಂ. ಇಂತಪ್ಪ ಸೊಬಗಿನ ಸುಂದರೀಮಣಿಯುಂ ಕೈವಿಡಿಯಲ್ $ ಮುಂಮೆಯ್ಯೊಳ್ $ ಅದೆಂತಪ್ಪ $ ನೋಂಪಿಯುಂ $ ನೋಂತರೋ ಕೌಂತೇಯರ್. ಈ ಮಂಗಳಾಂಗಿಯ ಮಂಗಳಾಂಗಾಲಿಂಗನದಿಂ ಅವರ್ ಅದೇಂ ಪೊಂಪುಳವೋಗಿ ಕೊಂಡುಕೊನೆಯುತೆ ಕೊರ್ಬಿದಪರೋ! ಅರರೆ! ಈಕೋಮಲಾಂಗಿಯುಂ $ ಕರ್ಚಿದ $ ನಳನಳಪ ಚಿಗುರ್ಗೆಯ್ಯಂ $ ಕಿಟ್ಟವೇಳ್ಕುಮಲ್ಲದೆ ಎಮ್ಮನ್ನರ್ ಇಂತಪ್ಪ ಕೇಳ್ಗೆಯ್ಯಂ ಕಿಟ್ಟುವುದುಂಟೇ? ಈಗಳ್ ಅಗೇ ನಾನುಮೊಂದುಹೂಟಿ ಎಸಗವೇಳ್ಪುದು. ಬಳ್ಳಿತು. ಈ ಪಾರಿಜಾತದ ಮರದ ಮರೆಯೊಳ್ ನಿಂದಪೆಂ. (ಎಂದು ಅಂತು ಮಾಳ್ಪಂ.)

---

ಝುಳಂಬ-ಪಂಸುಕು, ಪಿಡಿವೋಲ್-ಹೆಣ್ಣಾನೆಯಂತೆ, ಮುಂಮೆಯ್ಯೊಳ್-ಜನ್ಮಾಂತರದಲ್ಲಿ, ನೋಂಪಿ-ವ್ರತ, ಕರ್ಚಿದ-ತೊಳೆಯಲ್ಪಟ್ಟ, ಕಿಟ್ಟವೇಳ್ಕುಂ-ಮುಟ್ಟಬೇಕು.

(ಬಳಿಕೆ ದ್ರೌಪದಿ ಸುಶಾಂತೆ ಸುಜಟೆಯೆಂಬ ಸಖಿಯರೊಡನೆ ಪುಗುಗುಂ)

ದ್ರೌಪದಿ.-ಎಲೆ ಸುಶಾಂತೆ ! ಅದು ಅಂತಲ್ತು. ಆ ಕೌರವಾಧಮಂ ಎಮ್ಮಂ ವನವಾಸಕೆ ಕಳಿಪದೊಡೆ ಎಮಗೆ ಪಲವುಂ ಪುಣ್ಯಕ್ಷೇತ್ರಂಗಳೊಳ್ ಅಧಿಷ್ಠಾನಮುಂ ಪಲವುಂ ಪುಣ್ಯತೀರ್ಥಂಗಳೊಳ್ ಮಂಗಳಸ್ನಾನಮುಂ ಅಲ್ಲಲ್ಲಿ ಭಗವದ್ಧ್ಯಾನಮುಂ ಪಲಬರ್ ಮಾರಿಸಿಗಳ ಸಂದರ್ಶನಮುಂ ಪಲಂಬರ್ ಮಾಪುರುಸರ ಪಸಾಯಮುಂ ಪಲರ್ ನಿಮ್ಮನ್ನರ ಮಾರಿಸಿಗುಪರಿಯರ ನೇಹಮುಂ ಅದೆಂತು ಗಡ ದೊರೆಕೊಳುತಿರ್ದ್ದುವು ? ಅದರಿಂ ಆ ಬಗೆವಂ:—ಆ ಪಗೆಗಳ್ ಎಮಗೆ ಒಳ್ಳಿತನೆ ಮಾಡಿದರ್.

ದುರ್ವೃತ್ತಂ.-(ಸ್ವಗತಂ) ಈಕೆಯಲ್ತೆ ಸುಶೀಲೆ. ಪಗೆಗಳ ತಪ್ಪುಗಳುಮಂ ಎಣಿಸಳ್.

ಸುಶಾಂತೆ.-ಸಖಿ ! ಅಪಕೃತಿಯುಮಂ ಉಪಕೃತಿಗೆತ್ತು ಸಂತಸಂಬಡುವುದು ನಿನ್ನನ್ನರ್ಗೆ ಸುಜನರ್ಗ್ಗೆ ಸಾಜಂ.

ದ್ರೌಪದಿ-ನಿಕ್ಕುವಂ ನುಡಿದಪೆಂ. ಪರಮೇಶ್ವರನ ಚರಣಾನುಗ್ರಹದಿಂ ಈ ಕಾಡಿನೊಳಂ ಕೋಟಲೆಗೊಳ್ಳದೆ ಪದುಳಮಿರ್ಪ್ಪೆವು.

ಸುಜಟೆ.-ಸಖಿ! ಕೇಳ. ಭಾಗ್ಯಲಕ್ಷ್ಮಿ[illegible] ನೀಂ ಒಡನಿರೆ ಕಾಡುಂ ನಾಡಾಗದೇ ?

ದ್ರೌಪದಿ.-ಸುಜಟೆ ! ಕೇಳ್. ಆದೊಡಂ ಪಾಪಿಗಳ್ ಕಟ್ಟೋಲಗದೊಳ್ ಎನ್ನಂ ಪುಲ್ಲಂಬಗೆದು ಗಹಗಹನೆ ನಕ್ಕು ಮಿಕ್ಕು ತಾಂ ಏಳಿಸಿದರೆಂಬುದೊಂದು ಮನಮಂ ಇರದೆ ಚುಚ್ಚುರ್ಗುಂ.

ಸುಶಾಂತೆ-ಸಖಿ ! ಪೆಣ್ಗಳ್ಗೆ ತಮ್ಮ ಪಟ್ಟ ಕೋಟಲೆಗಳ್ ನೆರವೆಂಡಿರ ಗೊಟ್ಟಿಗಳೊಳ್ ಮಾತುಗುಟ್ಟುವಾಗಳೇಗಳುಂ ನೆನೆಪುವಟ್ಟೆಯುಂ ಅಡರದೆ ಇರದು. ಇದು ಸಾಜಂ. ಅದರೊಳಂ ಧೀರೋದಾತ್ತೆಯರಲ್ಲದ ಮುಗ್ಧೆಯರಾದೊಡೆ ಪಜ್ಜೆವಜ್ಜೆಗಂ ಬಸಬಸನೆ ತುಂಬಿ ತುಳುಂಕುವ ಕಣ್ಬನಿಗಳಂ ಜಳಜಳನೆ ಪೊನಲಿಡುತುಂ ಮಲಮಲನೆ ಮರುಗು

ತ್ರುಂ ಇರ್ದ್ದಪರ್. ಮಾಪುರುಷರ ಕೈವಿಡಿದ ಮಾಪದಿಬದೆಯಾದ ನಿನಗೆ ಏಂ $ ಊಣೆಯಂ? $ ಆಕುನ್ನಿಗಳ ಪ್ರಸ್ತಾವವೇಕೆ ? ಬಿಡುಬಿಡು.

ದ್ರೌಪದಿ.-ಸಖಿಯರಿರಾ ! ಇತ್ತನೋಳ್ಪುದು. ಪೂತಪಾರಿಜಾತವಿದು ಎಂತು ಪೂತಿರ್ಕ್ಕುಂ! ಸುಕುಮಾರಂಗಳಂ $ ಈನರುವೂಗಳಂ $ ಈಗಳ್ ಕೊಯ್ದುಕೊಂಡು ಉಯ್ವಂ. ಆರ್ಯಪುತ್ರನ ಪೂಜೆಯು ಪೊಳ್ತುಮೀರುಗುಂ. ಇನ್ ಆಂ ಕೋದು ಸರಂಗೆಯ್ವುದೆಂದು ?

ಸುಜಟೆ.-ಅಂತಕ್ಕೆ.

ದ್ರೌಪದಿ.-(ಮರದೆಡೆಗೆ ಪೋಗಿ ಸತ್ರನೆ ಹಿಂಜರಿದು) ಎಲೆ ಸಖಿಯರಿರಾ ! ಇತ್ತನೋಡಿಂ. ಈ ಮರದ ಪಿನ್ನಡಿಯೊಳ್ ಆರೊಪುರುಷರ್ ಗುರುಗುಮ್ಮನೆ ನಿಂದಿರ್ಕ್ಕುಂ.

ಸುಜಟೆ.-ಅದಾರಿಲ್ಲಿ ನಿಂದಿರ್ಪರ್ ?

ದುರ್ವೃತ್ತಂ.-(ಮುಂಸಾರ್ದು) ಮಂಗಳಾಂಗಿಯರಿರ ! ನಿಮಗೆ ಮಂಗಳಮಕ್ಕೆಮ. ಚೊಕ್ಕಳಂಮಿಗೆ ಕುಲಕ್ಕೆತಕ್ಕ ಅಲಂಕಾರದ ಮಕ್ಕಳಂ $ ಮೊಕ್ಕಳಂ $ ಪಡೆಯಿಂ.

ದ್ರೌಪದಿ.-(ಜನಾಂತಿಕಂ) ಸಖಿಯರಿರಾ! ಈತನಾರಿರ್ಕ್ಕುಂ? ಈತನ ಆಕೃತಿಯಂ ನೋಳ್ಪೊಡೆ ಮಾಪುರುಷನಂತೆ ಗಡ ಕಾಣ್ಗುಂ.

ದುರ್ವೃತ್ತಂ.-(ದ್ರೌಪದಿಯಂ ನೋಡಿ) (ಆತ್ಮಗತಂ) ಈಕೆಯ ಕಡೆಗಣ್ಣೋಟಂ ಜಗಕೆ ಆನಂದಕರವಾದೊಡಂ ಎನಗೆ $ ಅಳುಂಬಂ $ ನೋವನೆ ಮಾಳ್ಕುಂ.

ಕಂ॥ ಕುಡುಪುರ್ವ್ವದೊಂದು ಬಿಲ್ಲನೆ ।
ಕಡೆಗಣ್ಣೋಟಂ ಸರಲ್ಗಳೆನೆ ಪೆಣ್ಮಣಿ ತಾಂ ॥
ಅಡವಿಯೊಳೆನ್ನೆರ್ದೆ* ಮಿಗಮಂ ।
ತುಡುತ್ತು ಬೇಡಿತಿವೊಲಿಂದದೇನೆಚ್ಚಪಳೋ ॥ ॥೮೩॥

ಊಣೆಯಂ-ಕೊರತೆ, ನರುವೂಗಳಂ-ಸುವಾಸನೆಯುಳ್ಳ ಹೂಗಳನ್ನು, ಮೊಕ್ಕಳಂ-ಅತಿಶಯವಾಗಿ, ಅಳುಂಬಂ-ಅಧಿಕವಾಗಿ, ೮೩ ಎರ್ದೆಮಿಗಮಂ-ಹೃದಯವೆಂಬ ಜಿಂಕೆಯನ್ನು,

ಸುಜಟೆ.-ಪೂಜ್ಯರೆ ! ನೀವಾರ್ ?

ದುರ್ವೃತ್ತಂ.-ವಿಭಾಗಸುಮುನಿಯೆಂದು ಎನ್ನ ಪೆಸರ್. ತೀರ್ಥಾಟನಕ್ಕೆಂದು ಈ ಬನಕ್ಕೆ ಬಂದೆಂ. ದಾರಿನಡೆದು ಬಳಲ್ದೆಂ. ಅದರಿಂ ಈ ಮರದ ತಣ್ಣೆಳಲೊಳ್ ಇನಿತು ವಿಶ್ರಾಂತಿಯಂ ಎಯ್ದಲ್ ನಿಂದೆಂ.

ದ್ರೌಪದಿ.-ಪೂಜ್ಯರೆ ! ನಿಮ್ಮ ಸಂದರ್ಶನದಿಂ ಆಂ ಧನ್ಯೆಯರಾದೆವು. ನಿಮಗೆ ಈವಂದಿಪೆವು.

ದುರ್ವೃತ್ತಂ-ಮಂಗಳಾಂಗಿಯರಿರಾ ! ನಿಮಗೆ ಮಂಗಳಮಕ್ಕೆ.

ಸುಶಾಂತೆ-ಪೂಜ್ಯರೆ ! ಇತ್ತ ಕುಳ್ಳಿವುದು. ನೀಂ ಬಂಬಲ್ಪಳಲ್ದಿರ್ಪಿರ್.

ದುರ್ವೃತ್ತಂ-ನಿಚ್ಚಮುಂ ನಡೆವೆನಗೆ ಬಳಲ್ಕೆಯೇಂ? ಆದೊಡಂ ನಿಮ್ಮ ಬಯಕೆಯಂತೆ ಕುಳ್ವೆಂ. ನೀವುಮಿತ್ತ ಕುಳ್ಳಿರಿಂ.

ದ್ರೌಪದಿ-ಪೂಜ್ಯರೆ ! ತಮ್ಮ ಸನ್ನಿಧಾನದೊಳ್ ಆಂ ನಿಂದಿರ್ಪುದೇ ಎಮಗೆ ತಕ್ಕುದು.

ದುರ್ವೃತ್ತಂ.-ಎಲೆ ಸುಂದರಿಯರಿರ ! ನಿಮ್ಮ ಭಕ್ತಿಗೆ ಆಂ ಮಚ್ಚಿದೆಂ. ಆದೊಡಂ ನೀಂ ನಿಂದಿರ್ಪುದರಿಂ ಎನ್ನ ಮನಂ ಆಕುಳವಾದಪುದು; ಕುಳ್ಳಿಂ.

ದ್ರೌಪದಿ-ಅಕ್ಕೆ. ಮಹನೀಯರ ಮಾತಂ ಮೀರಲಾರೆವು.
(ಎಂದು ದೂರದೊಳ್ ಸಖಿಯರೊಡನೆ ಕುಳ್ಳಿಗುಂ.)

ದುರ್ವೃತ್ತಂ-ಮಂಗಳಾಂಗಿಯರಾದ ನಿಮ್ಮಂ ನೋಡಿದಮಾತ್ರದಿನೆ ನಿಮ್ಮೊಳ್ ಎನಗೆ ಅದೊಂದು ವಾತ್ಸಲ್ಯಮಾದತ್ತು.

ದ್ರೌಪದಿ-ಪೂಜ್ಯರೆ ! ಸದುಪದೇಶಂಗಳಿಂ ಸ್ಥಿತಿಡುವ ನೀಂ ಜಗಕ್ಕೆಲ್ಲಂ ತಂದೆವಿರೆನಿಪಿರ್. ತಂದೆಗಳ್ಗೆ ಮಕ್ಕಳೊಳ್ ವಾತ್ಸಲ್ಯಂ ಸಹಜಂ; ಅದರೊಳಂ ಪೆಣ್ಮಕ್ಕಳಂ ಕಂಡೊಡೆ ವಾತ್ಸಲ್ಯಂ ಅತಿಶಯಿತಮಾದಪುದು.

ದುರ್ವೃತ್ತಂ-ರಮಣೀರಮಣೀಯಮಣಿಗಳಿರ ! ನಿಮಗೆ ಸಾಮಾನ್ಯಮಪ್ಪ ಕೆಲವುಂ ಸ್ತ್ರೀಧರ್ಮಂಗಳಂ ಉಪದೇಶಿಪೆಂ. ಆಲಿಪುದು.

ದ್ರೌಪದಿ.—ಅದೇಂ ? ಬೆಸಸುವುದು.

ಧುಷ್ಕೃತ್ತಂ.—ಜಗದೊಳ್ ಪೆಣ್ಗಳ್ಗೆ ಪತಿಯೆ ಪರಮದೈವಂ ; ಪತಿಯೆ ಗತಿ ; ಪತಿಸೇವೆಗಂ ಪೆರತೊಂದು ವ್ರತಮಿಲ್ಲಂ. ಪತಿ ಮುಖಪನಾದೊಡಂ ಬಡವನಾದೊಡಂ ಕುರೂಪನಾದೊಡಂ ‡ ಆತನನಲ್ಲ ‡ ನಲ್ಲನಂ ಪೆರನಂ ಬಗೆಯೊಳಂ ಬಗೆವುದಾಗದು. ಆತನೊಳ್ ಪ್ರಿಯಮುಂ ಹಿತಮುಮಪ್ಪ ನುಡಿಯನೆ ನುಡಿಯುತ್ತುಂ ಆತನ ಮಾತಿಂಗೆ ಮುನಿಯದೆ ಆತನ ಆಣತಿಯಂ ಮೀರದೆ ಆತನ ಮನಕೆ ಅದೆಂದುಂ ಅನುಕೂಲೆಯಾಗಿರವೇಳ್ಕುಂ. ಭಾಗ್ಯಾನುಸಾರದಿಂ ದೊರೆತ ಉಡುಗೆ ದುಡುಗೆಗಳಿನೆ ತಣಿಯುವೇಳ್ಕುಂ. ತನಗೆ ದೊರೆಕೊಳ್ಳದ ತೊಡಂಗಳಂ ಬರಿದೆ ಬಯಸುವುದರಿಂ ಪಿಂಗಡ? ನೊಸಲೊಳ್ ತಿದ್ದಿರ್ದ ಪಿರಿಯ ಬಟ್ಟಬಟ್ಟನ ಕುಂಕುಮಮುಂ ಕೈಗಾಲ್ಗಳಪುಗಳೊಳ್ ಲೆಪ್ಪಂಬೂಸಿದ ಅರಿಸಿನಮುಂ, ಕಣ್ಗಳೊಳ್ ಇಟ್ಟ ಕಾಡಿಗೆಯುಂ, ಕೊರಲಂ ಬೆಳಗುವ ‡ ಐದೆದಾಳಿಯ ‡ ಕರ್ಮಣಿಯಸರವುಂ ಆಭರಣಕೆಲ್ಲಂ ಆಭರಣಮೆಂಬಿನಂ ‡ ಐದೆಯರ್ಗೆ ‡ ಪೆಗ್ಗಳದ ಕಳೆಯಂ ಅಳವಡಿಕುಂ. ಪರಪುರುಷರೊಡನೆ ಎಕ್ಕಟಿಯೊಳ್ ಸಲ್ಲಪಿಸುವುದಾಗದು. ಬೀದಿಯೊಳ್ ವಿಸಟಂಬರಿದು ಸಂಚರಿಪುದಾಗದು. ಪತಿಯೊಳ್ ಪಿಸುಣಾಡುವುದಾಗದು. ಅತ್ತಿಗೆನಾದಿನಿಯರೊಳ್ ಪಗೆವುದಾಗದು. ಆರೊಳಂ ಬಹುಭಾಷಣವಾಗದು. ಗಹಗಹನೆ ನಗುವುದಾಗದು. ಪಗಲೊಳ್ ‡ ಒರಗುವುದಾಗದು. ‡ ಸಿಗ್ಗಾಳಿಯಾಗಿ ಸದ್ಗುಣಾಭರಣಂಗಳಿಂ ಅಲಂಕೃತೆಯಾಗಿ ಸಾಧ್ವೀಮಣಿಯೆನಿಸಿಕೊಂಡು ಬಾಳ್ವುದು. ಪಲವಾತಿನೇಂ?

ಕಂ॥ ಶ್ರೀಮತಿಯೀಬಾಲಾಮಣಿ
ಧೀಮತಿ ವಿನಯವತಿ ಮತ್ತಮಕ್ಷರವತಿ ಮೇಣ್ ॥
ಹ್ರೀಮತಿಯೆನುತ್ತುಂ ಸುಜನರ್ ।
ತಾಮತಿಮ್ಮುದದಿಂದೆ ಮೆಚ್ಚುವಂತಿರವೇಳ್ಕುಂ ॥೯೮॥

ಸ.ಶಾಂತೆ.—ಪೂಜ್ಯರೆ! ಆವಿರ್ವರುಂ ‡ ಅನೂಢೆಯರ್. ‡ ಪ್ರಾ

ಆತನನಲ್ಲ—ಆತನಂಅಲ್ಲದೆ; ಐದೆದಾಳಿಯ—ಮಾಂಗಲ್ಯಸೂತ್ರದ; ಐದೆಯರ್ಗೆ—ಸುಮಂಗಲಿಯರಿಗೆ; ಒರಗುವುದು—ನಿದ್ರಿಸುವುದು; ಅನೂಢೆಯರ್—ಮದುವೆಯಾಗದವರ್.

ಣೆಯರಲ್ಲದೊಡಂ ಅಣಂ ಮೂಢೆಯರೆನಿಸದೆ ಸಮುಚಿತಮೆನೆ ಸನ್ಮಾರ್ಗಾನುವರ್ತಿನಿಯರಾಗಿರ್ದ್ದಪೆವು. ಅದಿರ್ಕೆ. ಈ ಪೂಜಾದಿಬದೆ ನಿಮ್ಮುಪದೇಶಕ್ಕೆ ಇಮ್ಮಡಿ ಮೂವಡಿ ನಾಲ್ವಡಿ ಐವಡಿ ಅರುವಡಿ ಪತ್ತುವಡಿ ನೂರ್ಮಡಿಯಲ್ತು. ಸಾಸಿರ್ಮಡಿ ಮೀಗಿಲೆನೆ ನಡೆವಳ್.

ದ್ರೌಪದಿ.-ಪೂಜ್ಯರೆ! ತಮ್ಮುಪದೇಶಮಂ ಸಿರದೊಳಾನ್ತೆಂ. ಮುನ್ನೆಮ್ಮ ತಂದೆಯೆನ್ನಂ ಪತಿಸದನಕೆ ಕಳಿಪುವಂದು ಪರಸಿ ಪದೆದು ಪೇಳ್ದ ಪರಿಪರಿಯ ಪರತರಬುದ್ಧಿವಾದಂಗಳ್ ಇಂದು ಎನ್ನ ನೆನಪಿಂಗೆ ಬಂದುವು.

ದುರ್ವೃತ್ತಂ.-(ಸುಶಾಂತಾನುಜಟೆಯರಂ ಕುರಿತು) ಸುಕುಮಾರಾಂಗಿಯರ್ ನೀವಾರ್? ತೊಳತೊಳಗುವ ಸಹಜಸುಂದರಿಯೀಕೆಯಾರ್? ಈಕಾಡಿಂಗೇಕೆ ಬಂದಿರ್?

ಸುಶಾಂತೆ.-ಪೂಜ್ಯರ್ಕಾಲಿಪ್ರುದು. ಈಕೆ ಪಾಂಡವಧರ್ಮಪತ್ನಿ ದ್ರೌಪದಿ. ಆವಿರ್ವ್ವರುಂ ಈಕೆಯ ಬಡನಾಡಿಯರ್.

ದುರ್ವೃತ್ತಂ-ಆಃ! ಈಕೆಯೋ ಪೆಸರ್ವೆತ್ತ ದ್ರೌಪದಿಯೆಂಬ ಪೆಣ್ಮಣಿ? ಈಕೆಯಂ ನೋಡಲೊಡಂ ಎನಗೆ ಪರಮಾನಂದಮಾದತ್ತು. ಆದೆಂತು ಈಕೆಗಂ ರಿಸಿಗುವರಿಯರಂತೆ ತೋರ್ಪ ನಿಮಗಂ ನೇಹಮಾದುದು?

ಸುಶಾಂತೆ.-ಆಲಿಪ್ರುದು. ಆವಿರ್ವ್ವರುಂ ಬನದೊಳಪ್ಪ ರಿಸಿಗುವರಿಯರೇ. ಈಕೆ ಈಬನಮಂ ಪೊಕ್ಕಂದಿನಿಂ ನಾಮೀಕೆಯ ಪೆಗ್ಗಳದ ಸಾಶೀಲ್ಯಕೆ ಮೆಚ್ಚಿ ಈಕೆಯೊಡನೆ ನೇಹಮಂ ಬಳೆಯಿಸಿದೆವು. ಈಕೆ ಬನದೊಳ್ ನೆಲೆಗೊಂಡಿಪ್ಪ ನಿಮಿತ್ತಂ ಆದೇನೆಂಬುದಂ ಆಂ ನಿರವಿಪ್ಪುದೇಕೆ? ಪಾಂಡವರ ಬನವಾಸವಿರ್ಪ ಸಂಗತಿ ಸುಜ್ಞರ್ ನಿಮಗಂ ವಿದಿತವಾಗಿರಲಕ್ಕುಂ.

ದುರ್ವೃತ್ತಂ-ಫುಲ್ಲಾಕ್ಷಿಯರಿರ! ಬಲ್ಲೆಂ ಬಲ್ಲೆಂ. ಎನ್ನಲ್ಲದೇಕೆ ಸೊಲ್ಲಿಸುವಿರ್? ಕೇಳ್ ಕಲ್ಲೆರ್ದೆಯನ ಎರ್ದೆಯುಂ ನಿಲ್ಲದೆ ತಲ್ಲಳಂ

ಗೊಳ್ಗೆ. ಜಳಜನವಲ್ಲಭಂ $ ಬಿಲ್ಲಂಗೋಲ್ವಿಲ್ಲನ $ ಚರಣಕಿಂಕರಂ ಆಕರುವುಲ್ಲಂ $ ಕವಡಂ ಕಲ್ಲದ $ ದುರ್ಜನರಲ್ಲದ ನಿಮ್ಮೊಳ್ ಬಲ್ಲದೆ ಮೆಲ್ಲನೆ ತಾಂ ಉಲ್ಲಸದಿಂ ಎಸಗಿದ ಸಲ್ಲದ ಪೊಲ್ಲದ ಭುಲ್ಲಣೆಯುಂ ಕಲ್ಗನೆ. ಜಗವೆಲ್ಲವುಂ ಬಲ್ಲದು॥

ಸುಜಟೆ.—ಸಂತರೆ! ಮೃದುಳಸ್ವಾಂತರೆನಿಸಿದ ಸೀಂಗಳ್ ಪೆರರ ಸಂತಾಪಕ್ಕೆ ಮನದೆ ಕರಗುವುದು ಸಾಜಮೆ. ಎಂತೆನೆ —

ಕಂ॥ ನವನೀತಕ್ಕಂ ಮಿಗಿಲೆನೆ।
ಭುವನದೆ ಮಿದುವಪ್ಪುದಾರ್ಯರೆರ್ದೆ* ನವನೀತಂ।
ದ್ರವಿಕುಂ ತನ್ನಯ ತಾಪದಿ।
ನವರೆರ್ದೆ* ಚಣದಲ್ಲಿ ಪೆರರ ತಾಪದಿನೊಸರ್ಗುಂ* ॥೮೯॥

ದುರ್ವೃತ್ತಂ.—(ಆತ್ಮಗತಂ) ಜಗದೆ ಕವಡನರಿಯದ ಪೆಣ್ಗಳ ಪಾಡೇ ಇಂತಪ್ಪುದು. ಪೆರರಾರಾನುಂ ತಮ್ಮೆಡೆಗೆಯ್ದಿ ತಮ್ಮೊಳ್ ಕನಿಕರದಿಂ ಮರುಕಗ ಬಂದೆರಳ್ಮಾತುಗಳಂ ಆಡಿದೊಡೆ ಸಾಲ್ಗುಂ. ಎಲ್ಲಮುಂ ನನಸೆಂದು ನಂಬಿ ಮರವಟ್ಟುಕೇಳ್ದು ಮನಮುಂ ಮಾರುಗುಡುವರ್. ಅದರೊಳಂ ಪುಕ್ಕಳ ಫಲಮುಂ ಸೂಚಿಪುದಾದೊಡೆ ಮನೆಯೆಸಕಂಗಳಂ ಉಳಿದು ಮುನ್ನಂ ಬಳಿಗೆಯ್ದಿ ಮನಮೊಸೆದಾಲಿಸಿ ಚಣದೆ ಭ್ರಾಂತುಗೊಂಡು ಮಾರುವೋಗಿ ಬೇಡಿದುದಂ ನೀಡುವರ್, (ಪ್ರಕಾಶಂ) ಅಕಟ! ಸುಖೋಚಿತೆ ಈಸುಕುಮಾರಾಂಗಿ ಎಂತುಗಡ ಕಾಡೊಳಿರ್ಕ್ಕುಂ?

ದ್ರೌಪದಿ.—(ಸ್ವಗತಂ) ಈಮಾರಿಸಿಗಳ ಮೆಲ್ನುಡಿಯಿಂದು ಎನ್ನ ಮನಮುಂ ಅಣಿಯರಂ ಸಂತವಿಡುಗುಂ. (ಪ್ರಕಾಶಂ) ಇತ್ತ ಗೆಂಟಿನೊಳ್ ಎಮ್ಮ ಎಲೆವನೆಯೊಂದಿರ್ಕ್ಕುಂ. ಪೂಜ್ಯರಲ್ಲಿಗೆ ಬಿಜಯಂಗೈದು ಎಮ್ಮ ಸತ್ಕಾರಮಂ ಕೈಕೊಂಡು ಮುಂತಣ್ಗೆ ಗಮಿಪುದು.

ದುರ್ವೃತ್ತಂ—(ಆತ್ಮಗತಂ) ಎನ್ನ ಜಾಲಕೆ ಸಿಲ್ಕಿಬಿಳ್ದಳ್; ಇರ್ಕ್ಕೆ. (ಪ್ರಕಾಶಂ) ಅತಿಥಿಸತ್ಕಾರಕ್ಕಂ ಪೆರತೊಂದು ಧರ್ಮಮಿಲ್ಲಂ. ಅತಿಥಿಯು

ಬಿಲ್ಲಂಗೋಲ್ವಿಲ್ಲನ – ಮನ್ಮಥನ; ಕವಡಂ ಕಲ್ಲದ – ಕಪಟವನ್ನು ಕಲಿಯದ,

ಮನಮುಂ ಎಂತುಂ ಆರಾಧಿಸವೇಳ್ಪುದೆಂಬುದಂ ನೀಂ ನಾಡೆ ತಿಳದಿರ್ದಪಿರ್. ನಿಮ್ಮ ಈವಿವೇಕಕೆ ಸಂತಸಂಬಡುವೆಂ. (ದ್ರೌಪದಿಯಂ ನೋಡಿ) ಎಲೆ ಮೋಹನಾಂಗಿ! ನಾನಿನ್ನುಂ ಮಿಗೆ ನಿಮ್ಮ ಸವಿನುಡಿಗಳಿಂ ಸತ್ಕೃತನಾದೆಂ. ಇಲ್ಲಿಯೆ ನಿಮ್ಮಂ ಅವ್ಯಾಜಕರುಣೆಯಿಂ ಪಾಲಿಸಿದಪೆಂ. ನಿಮಗೆಲ್ಲಂ * ಅತಿಶಯದ ಮಂಗಳಮಕ್ಕೆ. * ನಿಮ್ಮ ಮನೆಯೆಲ್ಲಂ ಚೆನ್ನವಾಗುಗೆ *.

ದ್ರೌಪದಿ.–(ಸ್ವಗತಂ) "ಎಲೆ ಮೋಹನಾಂಗಿ" (ಬಗೆದು) ಇದೇಂ ಎನ್ನಂ ಈ ಯತಿಗಳ್ ತಾಂ ಇಂತು ಸಂಬೋಧಿಪರ? "ಅತಿಶಯದ ಮಂಗಳಮಕ್ಕೆ. ನಿಮ್ಮ ಮನೆಯೆಲ್ಲಂ ಚೆನ್ನವಾಗುಗೆ" ಇದರೊಳಂ ವಿಪರೀತಂ ಅರ್ಥಾಂತರವುಂಟು. ಅದೇಕೋ ಮನಂ ಕಳವಳವಡುಗುಂ. (ಪ್ರಕಾಶಂ) ಪೂಜ್ಯರ ಎಮಗೆ ಆಣತಿಯನೀಯವೇಳ್ಕುಂ. ಪುಗಳಂ ಕೊಯ್ಯಲ್ಕೆ ಪೋದಪೆವು.

ದುರ್ವೃತ್ತಂ.–ಎನ್ನನೊರ್ವ್ವನನುಳಿದು ನೀಂ ಪೊರಮಡುವುದು ತಕ್ಕುದೇ?

ದ್ರೌಪದಿ.–(ಸ್ವಗತಂ) ಈ ನುಡಿಯಿಂ ಮನಂ ಮತ್ತೆ ಪಿರಿದುಂ ತಲ್ಲಣಂಬಡುಗುಂ.

ಸುಜಾತೆ–ಪೂಜ್ಯರೆ? ನೀಂ ಅದೇನಿಂತು ನುಡಿವಿರ? ಲೋಕಸಂಚಾರಿಗಳ್ಗೆ ನಿಮಗೆ ಎಮ್ಮ ನೆರವದೇಕೆ?

ದುರ್ವೃತ್ತಂ–ಎಲೆ ಮಂಜುಭಾಷಿಣಿಯರಿರ! ನಿಮ್ಮನೆರವಂ ಬಯಸಿ ಆನಿಂತು ನುಡಿದನಲ್ತು, ನಿಮ್ಮ ಮೇಲಣ ಕಟ್ಟಕರದಿಂ ನುಡಿದಪೆಂ. ಪುಷ್ಪಂ ಕೊಯ್ಯಲ್ಕೆ ಬೇಳ್ಪೊಡೆ ನೀವಿರ್ಬ್ಬರುಂ ಪೋಗಿಂ. ಶಿರೀಷಸುಕುಮಾರಾಂಗಿಯುಂ ಅರಸಿಯುಂ ಏಕೆ ಈಬಿರುಬಿಸಿಲ ಬಿಸರದೊಳ್ ಬರಿದೆ ಬಂಬಲ್ಬಳಲಿಪಿರ್? ಈಕೆಯೊರ್ವ್ವಳ್ ಇಲ್ಲಿಯೆ ಇರ್ಕ್ಕೆ.

---

* ಅಮಂಗಳಂ ಮತ್ತು ಮಂಗಳಂ--ಎಂದು ಪದವಿಭಾಗ. ಚೆನ್ನಂ--ಛಿನ್ನವಾದುದು) ಮತ್ತು ಚೆನ್ನ.

ದ್ರೌಪದಿ-(ಸ್ವಗತಂ) ಈತಂ $ ಬೋಸರಿಪ್ಪುದು $ ಏಕೋ ಮನಕೆ $ ಅತ್ಯಾಹಿತವನೀಗುಂ. $ ಏಗುವೆಂ? (ಪ್ರಕಾಶಂ) ಎನ್ನೊಡನಾಡಿಗಳಂ ಉಳಿದು ಆನೊರ್ವಳ್ ಇಲ್ಲಿರ್ಪೆನಲ್ತು. ಆನುಂ ಪೊರಮಡುವೆಂ (ಎಂದು ಪೋಗಲ್ ಯತ್ನಿಪಳ್).

ದುರ್ವೃತ್ತಂ-ಎಲೇ ವಿಲಾಸಿನಿ! ನಿಲ್ ನಿಲ್. ನೀಂ ಈಬಿರುವಿಸಿಲ ಜಳದೊಳ್ ಮುಂಜರಿವುದು ಸಲ್ಲದು.

ದ್ರೌಪದಿ.-ಎನ್ನಂ ಇಂತು ನೀಂ ತಡೆವುದಾಗದು.

ದುರ್ವೃತ್ತಂ.-ಅತಿಥಿಸತ್ಕಾರಮಂ ಎಸಗದೆ ಪೋಪುದು ನಿನಗೆ ತಕ್ಕುದೇ? ಆಂ $ ಎನಸುಂ $ ತಾಪಂಗೊಂಡಿರ್ಪೆಂ. ತಕ್ಕುಪಚಾರದಿಂ ಎನ್ನಂ ಸಂತಸಂಗೊಳಿಸ.

ದ್ರೌಪದಿ.-ಇಲ್ಲಿ ಉಪಚಾರಸಾಮಗ್ರಿಗಳೇನುಮಿಲ್ಲಂ. ಆನೇಗೆಯ್ವೆಂ. $

ದುರ್ವೃತ್ತಂ-ಎಲೆ ಮಾನಿನಿ! ನಿನ್ನ ಮಾತಿನಂತೆ ನೀನೆ ಗೆಯ್ಯು. ನಿನ್ನೀ ನಳನಳಪನಲ್ಗೊಡಲಿರೆ ಮತ್ತಿನಸಾಮಗ್ರಿಗಳೇಕೆ?

ದ್ರೌಪದಿ.-(ಜನಾಂತಿಕಂ) ಸಖಿಯರಿರ! ಈತನ ಕೊಂಕುನುಡಿಯುಂ ಕೇಳಿರೆ?

ಸುಶಾಂತೆ.-(ಜನಾಂತಿಕಂ) ಅಪ್ಪುದು. ಈತನ ಬಗೆಯೆ ಬೇರ್ಪಟ್ಟಂತೆ ತೋರುಗುಂ.

ದುರ್ವೃತ್ತಂ.-ಎಲೆ ವಧೂಮಣಿ! ಏಕೆ ಚಿಂತಿಸಿದಪೆ? ಅತಿಥಿಯುಂ ಮೊದಲ್ ಸತ್ಕರಿಸಿ ಸಂತಸಂಗೊಳಿಸ.

ಸುಶಾಂತೆ.-ಪೂಜ್ಯರೆ! ಇದೇಂ? ನಿಮ್ಮನುಡಿ ವಿಪರೀತವಾಗಿರ್ಪುದಂ.

---

ಬೋಸರಿಪ್ಪುದು-ಕಪಟಾದರವಂ ಮಾಡುವುದು. ಅತ್ಯಾಹಿತವಂ-ಮಹಾಭೀತಿಯನ್ನು, ಎನಸುಂ-ಅಧಿಕವಾಗಿ, ಆನೇಗೆಯ್ವೆಂ=ಆಂ+ಏಗೆಯ್ವೆಂ-ನಾನು ಏನು ಮಾಡಲಿ, ಆನೇ+ಗೆಯ್ವೆಂ-ನಾನೇ ಮಾಡುವೆನು, ಸೇದೆಯುಮಂ ಶ್ರಮವನ್ನು.

ದುರ್ವೃತ್ತಂ-ಎಲೆ ವೀರೆ! ನೀಂ ಅದೇಂ ಬಲ್ಲಿಹಸಂಗಾತಿಯರಾಗಿ ನುಡಿವೆ? ಅದೆಂತು ಎನ್ನನುಡಿ ವಿಪರೀತಂ?

ಸುಶಾಂತೆ.-ಅಪ್ಪುದು. ಸತ್ಕಾರಮಂ ಕೈಕೊಳ್ವುದೆಂದು ಅಂ ವೊತ್ತಮೊದಲೆ ಪ್ರಾರ್ಥಿಸಿದೆವು. "ಸಾಸಿರ್ವಡಿವಿಂಗೆ ನಿಮ್ಮ ಸವಿ ನುಡಿಗಳನೆ ಸತ್ಕೃತನಾದೆಂ" ಎಂದಿರ್. ಇಂದು ಮತ್ತೆ ಸತ್ಕರಿಪು ದೆಂಬಿರ್.

ದುರ್ವೃತ್ತಂ.-ಅಪ್ಪುದು. ಆಸತ್ಕಾರಮೋ ಬೇರೆ; ಈ ಸತ್ಕಾರಮೋ ಬೇರೆ.

ಸುಜಟೆ.-ಆದೊಡೆ ಇದಾವ ಸತ್ಕಾರಂ?

ದುರ್ವೃತ್ತಂ-ಇದು ಪರೋಪಕಾರಾರ್ಥಮಪ್ಪ ತನ್ನೊಡಲ ಸೇದೆ ಯುಮಂ ಲೆಕ್ಕಿಸದೆ ಓರಂತೆ ಕೂರ್ತು ಬಂದಾತನ ತಾಪಮಂ ಕಳೆದು ಸಂತವಿಪ ಮೊದಲನೆಯ ಸತ್ಕಾರಂ. ಅದು ಬಳಿಕಂ ಓಗರಮನುಣ ಲಿಕ್ಕಿ ಸವಿನೀರನೀಂಟಲಿತ್ತು ಆದರಿಪ ಎರಡನೆಯ ಸತ್ಕಾರಂ.

ಸುಶಾಂತೆ-ಅವುವಾನುಮಕ್ಕೆ. ನಿಮಗೆ $ತಕ್ಕತಿಥಿಸತ್ಕಾರಮಂ$ ಆಗಿಪೆವು. ಅಂತು ನಿಮಗೆ ಸತ್ಕಾರಾಪೇಕ್ಷೆಯಿರ್ದೊಡೆ ಇತ್ತ ಗಂಟಿ ನೊಳ್ ಇರ್ಪ ಎಮ್ಮ ಎಲೆವನೆಗೆ ಬನ್ನಿಂ.

ದುರ್ವೃತ್ತಂ.-ಅತ್ತ ಬಂದೊಡೆ ಎನಗೆ ಸುಖಮಪ್ಪುದೆ?

ಸುಶಾಂತೆ.-ಅದೇಕಿಂತು ಬೆಸಗೊಳ್ವಿರ್? ನಿಕ್ಕುವಂ ದಿವ್ಯಸುಖ ಮಪ್ಪುದು.

ದುರ್ವೃತ್ತಂ.-ಅಪ್ಪೊಡೆ ಅತ್ತ ಆರಾನು ಮಿಲ್ಲವೊ?

ಸುಶಾಂತೆ.- ಇಪ್ಪವರೆಲ್ಲರುಮಿರ್ಪರ್. ಅವರೆಲ್ಲರುಮಿರ್ಪುದ ರಿನೆ ನಿಮಗೆ ದಿವ್ಯಸುಖಮಪ್ಪುದು.

ದುರ್ವೃತ್ತಂ.-ಪೆರರಿರ್ಪೊಡೆ ಸುಖಮೆಂತಕ್ಕುಂ?

ಸುಶಾಂತೆ.-ಇದೇಂ? ನಿಮ್ಮ ಕುಯುಕದ ಕೊಂಕುನುಡಿ.

ದ್ರೌಪದಿ.-ಛೀ! ನೀವಿಂತು ನುಡಿವುದು ಸಲ್ಲದು.

ಸುಜಟೆ.-ಎಮಗೆ ಪರಮಾರ್ಥಮನುಪದೇಶಿಸಿದ ಬಳಯೊಳ್

---

$ತಕ್ಕತಿಥಿಸತ್ಕಾರಮಂ$-ತಕ್ಕ ಅತಿಥಿಸತ್ಕಾರವನ್ನು, ತಕ್ಕತಿಥಿಸತ್ಕಾರವನ್ನು.

ಕೀೞ್ನುಡಿಯುಂ ನುಡಿವುದೇ ?

ದುರ್ವೃತ್ತಂ.-ಇನ್ನೊಂದು ಬಾಯುಂ ಎಲ್ಲಿಂದ ತರ್ಪುದು ?

ಸುಕಾಂತೆ.-ಬಾಯಿನ್ನೊಂದಿಲ್ಲವಾದೊಡಂ ಇವರ್ಗೆ ನಾಲಗೆಯೆರಡುಂಟು.

ಸುಜಟೆ.-ಆದೊಡೆ ಇವರ್ $ ದ್ವಿಜಿಹ್ವರ್ $ ಅಂ ಇವರ ಎಡೆಯೊಳ್ ಇರ್ಪುದು ತರನಲ್ತು.

ದ್ರೌಪದಿ.-ಸಖಿಯರಿರ! ಬನ್ನಿಂ ಪೋಕೆ; ಪೊೞ್ತು ಮೀಱಿತ್ತು. ಬೇರೆಡೆಯೊಳಾದೊಡಂ ಪೋಗೆಯ್ವಂ.

ದುರ್ವೃತ್ತಂ.-ಎಲೆ ಮಾನಿನಿ! ನಿನ್ನ ಮೆಯ್ಯೊಬಗಿಂಗೆ ಎನ್ನ ಮನಂ ಪರವಶವಾದತ್ತು. ಸದ್ಗುಣಮಣಿಪೇಟಿಯಪ್ಪ ಎಲೆ ವಧೂಟೀಮಣಿ! ನಿನ್ನ ಗುಣಕೆ ಆಂ ಮಾರುವೋದೆಂ. ಎಲೆ $ ಖೇಟೀಜನವಿನುತೆ $ ಚೇಟನಾದ ನಾನೆ ನಿನಗೆ ಕೋಟಿಕುಸುಮಂಗಳನಾದೊಡಂ ಈವನವಾಟಿಯೊಳ್ ತಿರಿದು ತಂದೀವೆಂ. ನವಪಾಟಲಪಾಟಲಾಧರೆ! $ ವೀಟೀರಸವಿಳಸಿತವಪ್ಪ $ ನಿನ್ನ ಚೆಂದುಟಿಯುಂ ಈಂಟಲ್ ಎನಗೆ ಈಯದೆ ಚೆಲ್ವಿನ ಆಟಪಾಟದಿಂ ಬಿನದಿಸದೆ $ ಅಂಗಾಲ್ದೊವಲಂ $ ಉತ್ಪಾಟಿಪ ಈ ಬಿರುಬಿಸಿಲೊಳ್ ನಿಟ್ಟೋಟದೆ ನೀನೇಕೆ ಪೊಱಮಟ್ಟಪೆ? ಎಲೆ ನೋಟಕರ ಜೀವರತ್ನವೆ! ನಿನ್ನ $ ಸೆಲ್ವಾಟದ $ ನೀಟದ ಕಣ್ಗಳ ಕೋಟಿಯು ಸವಿನೋಟದ ಧಾಟಿಯುಂ ಆಟಿಸನಾಂ ಎರ್ದೆಯುಂ ತಾಟುವ ನಿನ್ನ ಬೇಟಮಂ ಸೈಪೆನೇ? ಎಲೆ ಸ್ಫಾಟಿಕಾಭಕಪೋಲೆ! ಎನ್ನೊಳ್ $ ನೆಲೆವೇಟಂಗೆಯ್ದು $ ತೆಂಬೆಲರ ತೀಟದಿಂ ಕೂಟಂ ಬಗೆವುಗೆ ಸರಲ್ಗಳಂ ಇಸುತೆ $ ತೋಟಗೈವ $ ಕಾಮನ ಕಾಟಮಂ $ ಸುಸಿಲಾಟದ $ ಪರಿಪಾಟಿಯೊಳ್ ಸಾಟಿಯಿಲ್ಲದ ಸೂಟಿಯಿಂ ಕಳೆದು ಕರುಣದಿಂ ಎನ್ನಂ ಕೈಗಾಯ್.

---

ದ್ವಿಜಿಹ್ವರ್—ಎರಡುನಾಲಗೆಯುಳ್ಳವರು; ಮತ್ತು ಸರ್ಪವೆನಿಸಿದವರು. ಖೇಟೀ—ದೇವಸ್ತ್ರೀ; ವೀಟೀ—ತಾಂಬೂಲ. ಅಂಗಾಲ್ದೊವಲಂ—ಅಂಗಾಲಚರ್ಮವನ್ನು; ಸಲ್ವಾಟದ—ಬಳ್ಳಿಯ ಅಂದದ. ನೆಲೆವೇಟಂ—ಸ್ಥಿರವಾದ ಅನುರಾಗ; ತೋಟ—ಯುದ್ಧ. ಸುಸಿಲಾಟದ—ಸುರತಕ್ರೀಡೆಯ.

ದ್ರೌಪದಿ-(ಸ್ವಗತಂ) ಶಿವಶಿವ !! ಈಗಳೇಗುವೆಂ? ಇದೇಂ ಬಂದೊದವಿತು? ಪಾಪಿಯೀತನೆನೋ ಜರುಚುವೆಂ. ಇವನಾವನೋ ಧೂರ್ತವಿಟಂ. ಆಳಗೊಳ್ವನೆಂಬುದಾ ಅರಿಯದಾದೆಂ (ಪ್ರಕಾಶಂ) ಛೀ ನೀಚ! ತೊಲಗು ತೊಲಗು. ಸಲ್ಲದ ಪೊಲ್ಲದ ನಿನ್ನ ಬೆಡಂಗಿನ ಬಿನ್ನಣದ ಬೆಲ್ಲದಂತಪ್ಪ ನುಡಿಗಳಂ ಸುಡುಸುಡು.

ದುರ್ವೃತ್ತಂ–ಎಲೆ ಮೋಹನಾಂಗೀ! ನ್ಯಾಯುವೇನೀನಿಂತು $ ಕಾದಲ್ಕೆಗೆಟ್ಟು $ ಎನ್ನಂ ಮಾಂಕರಿಪ್ಪುದು ?

ದ್ರೌಪದಿ-ಛೀ $ ಸಿತಗ $ ಮನೆಮುರಕ! ಪೆರವೆಂಡಿರಂ ಬಯಸಿ ನುಡಿವ ನಿನ್ನನಾಲಗೆ ಸಾಸಿರ್ತಿರಂ ಏಕೆಪೋಳದೋ? ಮೇಣ್ ಏಕೆ ಸರ್ಪನೆ ಬಳಸೇಂದು ಪೋಗದೋ?

ದುರ್ವೃತ್ತಂ-ಎಲೆಪೆಣ್ಮಣಿ! ನೀಂ ಪ್ರಸನ್ನೆಯಾಗು. ಏಕಿಂತು ಶಪಿಸಿದಪೆ? ಎನಗೆ ಪೆಂಡಿರಿಲ್ಲ, ದೊರೆತ ನಿನ್ನುಮಂ ತೊರೆದು ಪೋಪುದೆಂತು? ಎಂತಾನುಮೆನ್ನಂ ಕೈವಿಡಿಯು.

ಸುಜಟೆ - (ಸ್ವಗತಃ) ಹಾ! ಇನ್ನೇಗತಿ? ಉಪಕ್ರಮಿಸಿದುದೆ ಪೆರತು ಬಂದೊದವಿದುದೆ ಪೆರತು.

ದ್ರೌಪದಿ-- ಎಲೆಪಾಪಿ $ ಬದಸಿಗ $ ಜರುಚದಿರು. ಬರಿದೆ ಕಿಡುವೆ. ಛೀ! ಇನ್ನನೆಂ ನಿನ್ನಂ ಮುನಿಗೆತ್ತು ಪೂಜ್ಯನೆಂದು ನಾಂ ವಂದಿಪರ್ಥೇ?

ದುರ್ವೃತ್ತಂ--ಎಲೆ ಕಾಮಿನೀಮಣಿ! ಮಗುಳ್ದುಂ ನಿನಗೆ ಮೆಯ್ಯಿಕ್ಕುವೆಂ. ಕನಲದಿರ. ಬೇಳ್ಪೊಡೆನೀಂ ಎನ್ನಂ ಎಡಗಾಲಿಂ ಒದೆ. ಆನದಂ ಮೋಹಸಾದಮೆಂಬೆಂ. ನಿನ್ನಡಿಯ $ ಅಚ್ಚುಳಾಯ್ತನಾದೆನ್ನಂ $ ಕರುಣಿಸ.

---

ಕಾದಲ್ಕೆ--ಅನುರಾಗ, ಸಿತಗ--ಜಾರ. ಬದಸಿಗ - ಕಾಟಲ್ಯವುಳ್ಳವನು.

ಅಚ್ಚುಳಾಯ್ತ-ಸೇವಕ (ಗುಲಾಮ)

ದ್ರೌಪದಿ- ಛೀ $ ನಾಣಿಲಿ $ ದುರುಳ ! ವೋಸಕಾರ ! ಪಾಪಿ ! ನಿನಗೆ ಈ ನಿವಿಸದೊಳ್ ತಕ್ಕ ಶಾಸ್ತಿಯಕ್ಕುಂ (ಸಖಿಯರಂ ನೋಡಿ) ಸಖಿಯರಿರಾ ! ತಳ್ವದೆ ಆರ್ಯಪುತ್ರನಂ ಬರವೇಳ್ಕುಂ.

ದುರ್ವೃತ್ತಂ- ಎಲೆ ಯೋಗ್ಯತಾನಭಿಜ್ಞೆ ! ಆರ್ಯಪುತ್ರರ್ ಬಂದು ಎನ್ನಂ ಏಗೆಯಲಾರ್ಪ್ಪರ ? ಏಕೆ ಬರಿದೆ ಕನಲ್ವೆ ? ನಿನ್ನ ಮಂಗಳಾಂಗಾಲಿಂಗನದ ಸತ್ಕಾರದಿಂ ಎನ್ನಂ ಆನಂದಿಸ.

ಸುಕಾಂತೆ- ಎಲೆ ದುರ್ಲಲಿತ ! ನಿನಗೆ ತಕ್ಕ $ ಕಸಕಿಲ್‌ಬಡಿತದ $ ಸತ್ಕಾರಂ ಆಗಲೆವೇಳ್ಕುಂ. ಇಲ್ಲದೊಡೆ ಮೆಯ್ಯ $ ತೀಟ $ ಪೋಗದು.

ದ್ರೌಪದಿ- ಛೀ ಪಾಪಿ ! ಕೆಮ್ಮನಿರು. ನೀಂ ಬೆಚ್ಚನೆಕಾಯ್ದುರ್ಕಿನ ಪೆಣ್ಪಾಪೆಯುಂ ಆನಂದದಿಂ ದಿಮ್ಮನೆ ತಳ್ಕೆಗೊಂಡಪೆ. ಎನ್ನ ಆರ್ಯಪುತ್ರರ್ ನಿನ್ನಂ ಏಗೆಯಲಾರರೇ ? ಸಿಲ್ ಸಿಲ್. (ಆಗಸದಲ್ಲಿ) ಆರ್ಯಪುತ್ರರಿರಾ ಆರ್ಯಪುತ್ರರಿರಾ !

(ತೆರೆಯಲ್ಲಿ) ದೇವೀ ! ಎಲ್ಲಿರ್ದಪೆಯೆಲ್ಲಿರ್ದಪೆ ? ಈ ಬಂದೆನೀಬಂದೆಂ.

ಸುಕಾಂತೆ-(ನೋಡಿ) ಸಖಿ ! ಇತ್ತನೋಡ. ಕುಮಾರನಕುಲನೀ ಬಂದನೀಬಂದಂ.

ದುರ್ವೃತ್ತಂ-(ಮೆಲ್ಲನೆಳ್ದು) (ಸ್ವಗತಂ) ಇನ್ನಿಲ್ಲಿರ್ಪ್ಪುದು ತರಮಲ್ತು. ಕಾಲ್ಗೆ ಬುದ್ಧಿಯುಂ ಪೇಳವೇಳ್ಕುಂ. (ಪ್ರಕಾಶಂ)ಎಲೆ ಮಂಗಳಾಂಗಿಯರಿರ! ಆಂ ಪೋಗಿಬರ್ಪೆಂ. ಬಿನದಕೆಂದಾಂ ನುಡಿದ ನುಡಿಗಳಂ ಪರಮಾರ್ಥವೆಂದು ನೀಂ ಎಣಿಸಲಾಗದು.

ಕಂ॥ ಉತ್ತಮವೆನಿಸಿದ ನಿಮ್ಮಯ ।
ಚಿತ್ತಮನರಿಯಲ್ಕೆ ನುಡಿದುದಂ ನೀಂ ಸಾಜಂ ॥
ಗೆತ್ತು ಕನಲ್ವುದೆ ? ಮಾಣಿಂ ।
ಕಿತ್ತಡಿಗೆನಗೇಕೆ ಕೆಟ್ಟ ಕಾಮವಿಚಾರಂ ॥ ೯೦ ॥

(ಎಂದು ಪೊರಮಡುವಂ)

---

ನಾಣಿಲಿ-ಲಜ್ಜಾಹೀನ, ಕಸಕಿಲ್-ಕಸಪರಿಕೆ, ತೀಟ - ಕಡಿತ, ೯೦ ಕಿತ್ತಡಿ-ಮುನಿ;

ದ್ರೌಪದಿ.– ಎಲೆ ಪಾಪಿ ವಂಚಕ! ಏಕೆ ಪಿಣ್ಣನೆ ನಡೆದಪೆ? ಸತ್ಕಾರಂ ಬೇಡವೇ? ಪರಸ್ತ್ರೀಕಾಮುಕರಪ್ಪ ನಿನ್ನನ್ನರ್ಗೆ ಅಪ್ಪ ಸತ್ಕಾರಂ ಬೇರೆಯಿರ್ಪುದು. ಮುಂ ಕುಸುಮಶರಶರವಿಸರದಿಸುಗೆಯು ಬಿಸುಪಂ ತರಹರಿಸಲಾರದೆ ತಳಮಳಗಾಗೆ ‡ಮೆಳ್ಪುಗೊಂಡು‡ ಕವಡು ವರಿಜೆನಿಂ ಬನದೊಳಿರ್ದ ಜಗನ್ಮಂಗಳಮೂರ್ತಿಯುಂ ಮಹಾದೇವಿಯುಂ ವೈದೇಹಿಯುಂ ಆಳ್ಗೊಂಡು ಕೊಂಡುಯ್ದ ದುಷ್ಟದಶಕಂಧರನ ಗತಿಯೇನಾಯ್ತು? ಇಂ ಕೆಲಬರ ಪಾಡುಗಳಿನ್ನೇನಾದುವು? ಮನದೊಳೊಮ್ಮೆಯೆಣಿಸು. ಇಹದೊಳಂಪರದೊಳಂ ನಿಮ್ಮನ್ನರ್ಗ್ಗೆ ದುರ್ಗತಿಯೊಂದಿಂಗಂ ತಪ್ಪದು.

ನಕುಲಂ– (ಬಂದು) ದೇವಿ! ಅದೇನದೇಂ?? ಏಕೆ ಕಮಬುಗೊಂಡು ಕೂಗಿದೆ?

ದ್ರೌಪದಿ- ಆರ್ಯಪುತ್ರ! ಪೂಗೊಯ್ಯಲೆಂದು ಇಂದು ಆಪಿಲ್ಲಿಗೆ ಬಂದೆವು.

ನಕುಲಂ- ಅಪ್ಪುದು, ಸಿಚ್ಚಮುಂ ಬರುತಿರ್ದಿರ್. ಇಂದೇನಾಯ್ತು?

ದ್ರೌಪದಿ - ಏನಾಯ್ತೆಂದು ಪೇಳ್ದಪೆಂ? (ಎಂದು ನಾಣಂ ಅಭಿನಯಿಪಳ್)

ನಕುಲಂ – ದೇವಿ! ಆದುದಂ ನಾಣ್ಚದೆ ಪಿಕ್ಕಿ ಪೇಳ.

ದ್ರೌಪದಿ.– ಕವಡುಗಿತ್ತಡಿ ದುರುದುಂಬಿ ‡ಹರಳಿಗಂ‡ ಆವನೊ ಬರ್ವ್ವಂ ಇಲ್ಲಿಗೆಯ್ತಂದಂ. ಎಮ್ಮಂ ವಂಚಿಸಿ ಕೀಳ್ನುಡಿಗಳಂ ನುಡಿದು ಮನಕೆ ಅದೆಂದುಮಿಲ್ಲದ ‡ಪೆಳರಂ‡ ಬದವಿಸಿದಂ.

ನಕುಲಂ - ಆದುರುಳನಾರ್? ಎಲ್ಲಿಪ್ಪೋದಂ? ನಿನ್ನಂ ಇರದೆ ಕೆಣಕಿದ ‡ಅಬೋಜಂಗಂ‡ ಕಾಳಭುಜಂಗಿಯುಂ ಕೈಯೊಳ್ ತುಡುಕುವ ಎಗ್ಗಂಗೆ ಪಾಸಟಿಯೆನಿಪಂ. ಅವಂ ಪೋದದಾರಿಯುಂ ಎನಗೊಯ್ಯನೆ ತೋರ. ಆರ್ಯಯುಧಿಷ್ಠಿರನಿರ್ದಪಂ. ಆರ್ಯರ್ ಭೀಮಾರ್ಜುನರಿರ್ದಪರ್. ಆಸಿರ್ದಪೆಂ. ಸಾದೇವನಿರ್ದಪಂ. ಸೀನೇಕೆ ಚಿಂತಿಸುತಿ

ಮೆಳ್ಪು- ಭ್ರಾಂತಿ. ಹರಳಿಗಂ- ಜಾರ; ಪೆಳರಂ- ಭಯವನ್ನು; ಬೋಜಂಗಂ- ವಿಟ,

ರ್ದಪೆ ದೇವಿ ? ಮಹಾಮಹಿಮಂ ಶ್ರೀಕೃಷ್ಣಪರಮೇಶ್ವರಂ ಎಮಗೆ ಬೆಂಬಲನಾಗಿರ್ದಪಂ. ಎಮಗೇನುಂ ಪೊಲ್ಲಮಾಗದು. ನಡೆ ; ಅವಂ ತೊಲಗಿದದಾರಿಯುಂ ತನಕದಿಂ ತೋರ. ಅವನಾರಾನುಮಕ್ಕೆ. ಎನ್ನ ಕಣ್ಗೆ ಗೋಚರನಾದೊಡೆಸಾಲ್ಗುಂ. ಪರಮೇಶ್ವರನ ಅನುಗ್ರಹದಿಂ ಅವನಂ ಜಕ್ಕನೆ ಜವದಿಂ ಬಕ್ಕಲಿಕ್ಕಿ ಜವನ † ದಕ್ಕಡದ § ಜಕ್ಕಂದೊಳಲಿಗೆ § ಇಕ್ಕುವೆಂ.

ದ್ರೌಪದಿ.– ಆರ್ಯಪುತ್ರ ! ಭಗವಂತಾ ಶ್ರೀಕೃಷ್ಣಂ ಎಮ್ಮ ಪಿಂದೆ ಕಾದಿರ್ಪನೆಂದು ನಾಂ ನಂಬಿರ್ದಪೆಂ.

ನಕುಲಂ.–ದಲ್. ನಡೆನಡೆ ಪೋಪಂ. ಮುನ್ನೆನಗಾದುರುಳನಂ ತೋರ.

ದ್ರೌಪದಿ.- (ಮುಂತಣ್ಗೆ ಸಾಲಿಡಿಯಿಟ್ಟುನೋಡಿ) ಆಗಳೆ ಎನಿತು ದೂರ ವೆಯ್ದಿದಂ? (ಸುಟ್ಟಿಸಿ) ಆರ್ಯಪುತ್ರ ! ಈ ಬಡಗಣದೆಸೆಯೊಳ್ ನೋಡು ನೋಡು ಕಣ್ಗೆ ವರುತಿರ್ಪನಾದುರುಳಂ.

ನಕುಲಂ – ದೇವಿ ! ಇರ್ಕೆ ಆನತ್ತಲ್ ಪೋಗಿ ಬಿಡದೆ ಪಿಡಿದು ಅವನಂ ಸದೆಬಡಿವೆಂ. ನೀಂ ನಿನ್ನ ಕೆಳದಿಯರೊಡನೆ ಮರಲ್ದು ಎಮ್ಮ ಲೆವನಯುಂ ಸಾರ. ನಿನ್ನ ಆಕದುಬಿನ ಕೂಗಿಪಿಂ ಚೊತಿಸುತಿರ್ಪ ಆರ್ಯಂಗೆ ಈ ಸಂಗತಿಯುಂ ಮುಂಬಿನ್ನವಿಸ. ಆನುಂ ಬೇಗದೆ ಬಂದಪೆಂ. (ಎಂದು ಪೋಪಂ)

ದ್ರೌಪದಿ.– ಸಖಿಯರಿರ ! ಪರಮೇಶ್ವರನ ಅನುಗ್ರಹದಿಂ ಇಂದು ವಿಜಯಪ್ರಾಪ್ತಿಯಾಗದೆ ಇರದೆಂದೆಣಿಪೆಂ.

ಸುಶಾಂತೆ – ಸಖಿ ! ನಿನಗೆ ವಿಜಯಪ್ರಾಪ್ತಿಯೆಂಬುದು ನಿಚ್ಚಲು ಮುಂಟುಗಡ.

ದ್ರೌಪದಿ.- ಸಖಿ ! ಸುಶಾಂತೆ ! ನಿನ್ನ ಚದುರ್ನುಡಿಯನಾಂ ಬಲ್ಲೆಂ. ಬನ್ನಿಂ ಪೋಪಂ

(ಎಂದು ಎಲ್ಲರುಂ ಪೋಪರ್)

## ಇಂತಿದು ತೃತೀಯಾಂಕಂ.

---

ದಕ್ಕಡದ- ಶೌರ್ಯದ ; ಜಕ್ಕಂದೊಳಲಿಗೆ- ಕೋಣನಿಗೆ.

ಕೇಕಯಂ.- ಎಲೆ ಧೃಷ್ಟಕೇತು! ನೀಂ ನುಡಿದುದು ನನ್ನಿ. ಆ ನೀಚಂ ದೊರೆವಡೆದ ಕುರುಕುಲದೊಳ್ ಪುಟ್ಟಿದಮಾತ್ರದಿಂ ಏಂ?

ಕಂ॥ ಅವನಿಯೊಳುತ್ತಮವಂಶದೊ।
ಳವತರಿಸಿದೊಡಂ ದುರಾತ್ಮನಭಿಮತವೆನಿಸಂ॥
ಸವಿಗಡಲೊಳವರಿಯೊಳ್ ಸಂ।
ಭವಿಸಿದೊಡಂ ಬಿಸಮದಾರ್ಗ್ಗೆ ಮೋದಮನೀಗುಂ॥೯೧॥

ಭೋಜಂ.- ಎಲೆ ಕೇಕಯಾ! ಆನಾಯುಂ ಎನಿತ್ತು ಮಾಂಕರಿಸಿದೊಡೇಂ ಬಿಡು.

ಕೇಕಯಂ. ಅವನಂ ನಾಯೆಂದು ತಾನೇ ಎಂತು ಪೇಳ್ವೆ? ನಾಯೊಳ್ ಎನಿತೊ ಕೃತಜ್ಞತೆಮುಂತಪ್ಪ ಸುಗುಣಂಗಳುಂಟು

ಭೋಜ - ಅಂತಾದೊಡೆ ಕಳ್ತೆಯೆಂಬಂ.

ಕೇಕಯಂ.- ಭೋಜಾ! ಇದು ತಾನೇ ಏತುಸಲ್ಗುಂ? ಕಳ್ತೆ ಅಲಸದೆ ಬಟ್ಟೆವೊಟ್ಟೆಗಳಂ ಪೊತ್ತುಯ್ದು ಮಡಿವಳಂಗೆ ಉಪಕಾರಂಗೆಯ್ಗುಂ. ಪೆರರಂ ಬಾಧಿಸದು. ಸಾಧು, ಮೇಣ್ ಸಹಿಷ್ಣು.

ಭೋಜಂ - ಆದೊಡೆ ಮತ್ತೇನೆಂದು ಪೇಳವೇಳ್ಕುಂ?

ಧೃಷ್ಟಕೇತು.- ಲೋಕವಿಚಿತ್ರವಪ್ಪ ಆಪುರುಷಮೃಗಮಂ ಏನೆಣ್ಣಪುದು?

ಕೇಕಯಂ.- ಸುಖೋಚಿತರ್ ಪಾಂಡವರ್ ಇತ್ತಬನದೊಳ್ ಎಂತು ಪೊತ್ತಂ ಕಳೆಯಲಾರ್ಪರ್? ಅಕಟ! ಆ ಮಹಾನುಭಾವರ್ಗ್ಗೆಂ ಈ ಯೆಡರಾಯ್ತೇ?

ಧೃಷ್ಟಕೇತು - ಎಲೆ ಕೇಕಯಾ! ಭವಿತವ್ಯತೆ ಬಲವತ್ತರವಲ್ತೆ? ಬಿದಿಯಾಣತಿಯಂ ಆರ್ ಮೀರಲಾರ್ಪ್ಪರ್? ಮನದೆ ಮಮ್ಮಲಮರುಗುವುದರಿನೇಂ ಫಳಂ?

ಕೇಕಯಂ.- ಪುರುಸರವರ್ ಎಂತಾನುಂ ಕ್ಲೇಶಮಂ ಸೈಸಲಾರ್ಪರ್. ಅರಮನೆಯ § ಕನ್ನೆವಾಡಮಂ ಬೆಳಗುವ ಸುಕುಮಾರಗಾತ್ರಿ ದ್ರುಪದೇಂದ್ರಪುತ್ರಿ ಎಂತು ಈ ಕಾಡಿನೊಳ್ ನಿವಾಸಿಪಳ್ ?

ವೃ॥ ಸಿರಿಸಂಜೊಲ್ ಮೃದುವಪ್ಪತಲ್ಪದೆ ಸುಖಿಪ್ಪಾಕಾಂತೆ ಕಾಂತಾ
ರದಂ । ತರದೊಳ್ ದಂತುರವಪ್ಪ ಕಲ್ಗಳಡೆಯೊಳ್ ಪಟ್ಟೆಂತು
ನಿದ್ರಿರ್ಪಳೋ ॥ ಸರಸವ್ಯಂಜನಶಾಕಸೂಪಘೃತಸದ್ಭಕ್ಷ್ಯಂ
ಗಳಿಂದೊಪ್ಪುವೋ । ಗರಮಂ ನೀಗುತೆ ಕಂದಮೂಲಫಲದಿಂ
ತಾರೋಗಿಸುತ್ತಿರ್ಪಳೋ ॥ ೯೨ ॥

ಶ್ರೀಕೃಷ್ಣಂ - ಎಲೆ ರಾಜೇಂದ್ರರಿರ ! ಮೂಜಗದ ಪಡಿಬದೆಯರ ಮುಡಿವಣಿಯೆನಿಪ ಪಾಂಚಾಲಿ ತನ್ನ ಪತಿಗಳಪ್ಪ ಪಾಂಡವರಂತೆ ತಾನುಂ ಕಷ್ಟಂಬಡುವುದು ಸಮುಚಿತಮಲ್ತೆ !

ಕಂ॥ ಪುರುಷಂ ಪೋದದೆ ಮರುಗು ।
ತ್ತಿರೆ ತಾಂ ಮರುಗುವುದು ಪತ್ತವೋದದೆ ಸುಖಿಸು ॥
ತ್ತಿರೆ ತಾನುಂ ಸುಖಿಪುದು ಕೇ ।
ಳ್ತರಸಿದು ಕೈವಿಡಿದ ಸತಿಗೆ ನಲ್ಲರನೆಸಿಕುಂ ॥ ೯೩ ॥

ಭೋಜಂ.- ದೇವನೆ ! ಪಾಂಡವರ್ ಈಯರಣ್ಯದೊಳ್ ಅನ್ನಕ್ಕೆ ಅದೇನಂ ಮಾಳ್ಪರ್ ?

ಶ್ರೀಕೃಷ್ಣಂ- ಎಲೆ ಭೋಜನೆ ! ಮಹಾನುಭಾವವಿಭಾವಸುವಿನತ್ತಣಿಂ ಯುಧಿಷ್ಠಿರಂ ಅಕ್ಷಯಭಾಜನಮಂ ಪಡೆದ ಸುದ್ದಿಯಂ ನೀಂ ಕೇಳ್ದರಿಯಾ !

ಭೋಜಂ.- ಅದೇನದೇಂ ?

---

§ ಕನ್ನೆವಾಡಮಂ-ಕನ್ಯಕೆಯರಿರುವ ಉಪ್ಪರಿಗೆಯನ್ನು,

೯೨ ಪಟ್ಟು-ಮಲಗಿ, ೯೩ ನಲ್ಲರಂ-ಸದ್ಧರ್ಮ;

ಶ್ರೀಕೃಷ್ಣಂ.- ಓವೊ! ನೀವರಿಯಿರೆ? ಆಲಿಸಿಂ. ಯುಧಿಷ್ಠಿರಂ ಜೂಜಿನೊಳ್ ಸೋಲ್ತು ಪರಿಜನಂಬೆರಸು ಹಸ್ತಿನಾವತಿಯತ್ತಣಿಂ ಕಾಡಿಂಗೆ ಪೊರಮಟ್ಟಂ ಗಡ.

ಭೋಜಂ.- ಅದೆಲ್ಲಂ ವಿದಿತಮಾಗಿಯೆ ಇರ್ಕ್ಕುಂ. ಬಳಿಕಂ?

ಶ್ರೀಕೃಷ್ಣಂ.- ಬಳಿಕಂ ನಡುವಟ್ಟೆಯೊಳ್ ಭೀಮಾದಿಗಳುಂ ಬೆಂಬಿಳ್ದ * ಪಿರಿಯರುಂ * ಮೀರಿದಕ್ಷುಧಾಗ್ನಿಯಿಂ ಪರಿತಪಿಸುತ್ತಿರೆಯಿರೆ,

ಕಂ|| ಬೇಸರನಾನದೆ ಭೂಪತಿ |
ಭೂಸುರವರರೊಲ್ದು ಧೌಮ್ಯರಾದೇಶಿಪುದುಂ ||
ವಾಸರಪತಿಯಂ ಬಗೆಯೊಳ್ |
ಭಾಸುರತರಭಕ್ತಿಯಿಂದದೇಂ ಭಜಿಸಿದನೋ || ೯೪ ||

ಬಳಿಕಂ ಭಾನುಮಾತನ ಭಕ್ತಿಗೆ ಮೆಚ್ಚಿ ತಾಂ ಇದಿರ್ವಂದು ಪನ್ನೆರಳ್ಬರಿಸಂಬರಂ ಕೈಸೋಂಕಿನಿಂದಮೆ ತರತರದ ನಲ್ಲುಣಿಸಂ ಬದವಿಪ ಲೋಕೋತ್ತರಮಪ್ಪ ಅದೊಂದು ಕಿಸುವಣ್ಣದ ಭಾಜನಮಂ ಇತ್ತು ಅಲ್ಲಿಯೆ ಮಯ್ಗರೆದಂ.

ಭೋಜಂ - ಅಮಮ! ಜಗಚ್ಚಕ್ಷುವಂ ಪ್ರತ್ಯಕ್ಷನಂ ಮಾಡಿಕೊಂಡ ಯುಧಿಷ್ಠಿರಂ ಅದೇಂ ಪರಿಶುದ್ಧನೋ ಅದೇಂ ಭಕ್ತಿಸಮೃದ್ಧನೋ ಅದೇಂ ಪ್ರಬುದ್ಧನೋ ಅದೇಂ ಪ್ರಸಿದ್ಧನೋ?

ಶ್ರೀಕೃಷ್ಣಂ.- ಸಾಸಿರ್ವ್ವರಡಿಗಳನೇಂ? ಧರ್ಮಾತ್ಮರ್ ಪಾಂಡವರ್ ಕಾಡಿನೊಳಂ ಸೊಗವಿರ್ಪ್ಪರ್. ನೀವೇಕೆ ಚಿಂತಿಸುತೆ ಮಮ್ಮಲಂ ಮರುಗುವಿರ್? (ಎಂದೆಲ್ಲರೊಡನೆ ಸ್ವಲ್ಪದೂರಂ ಪೋಪಂ)

( ತೆರೆಯಲ್ಲಿ ಸಲ್ಲಾಪಂ )

ಶ್ರೀಕೃಷ್ಣಂ—(ಕೇಳ್ದು) ಇದೆಕೊಳ್ಳಿಂ. ಇತ್ತಲ್ ಜನಸಲ್ಲಾಪಂ ಕೇಳ್ಗುಂ. ಇಲ್ಲಿಯೆ ಯುಧಿಷ್ಠಿರಾದಿಗಳ್ ಇರ್ದಪರೆಂಬೆಂ. ಬನ್ನಿಂ ಇತ್ತಲ್ ಬಳವುಗುವಂ.

( ಎಂದೆಲ್ಲರುಂ ಪಾಯ್ದುಂ ತೆರಳ್ವರ್ )

* ಪಿರಿಯರ್=ಬ್ರಾಹ್ಮಣರು.

(ಬಳಿಕ ಪರಿಜನದೊಡನೆ ಕುಳ್ಳಿರ್ದ ಯುಧಿಷ್ಠಿರಂ ಪುಗುವಂ)

ಯುಧಿಷ್ಠಿರಂ.–ಭ್ರಾತೃಗಳಿರೆ! ಆವಿತ್ತಲ್ ಕಾಡಿಂಗೆ ಬಪ್ಪುದುಂ ಎಮ್ಮ *ಪಕ್ಕುವಣಿಗಳುಂ* ಸುಹೃನ್ಮಣಿಗಳುಂ ಎಮ್ಮಂ ಉಪೇಕ್ಷಿಸಿದರಕ್ಕುಂ. ಇನ್ನೆವರಂ ನೋಡಲ್ ಆರುಂ ಬಂದರಿಲ್ಲಂ. ಅಂತಲ್ತು –

ಕಂ॥ ಸಿರಿಯಿರೆ ಸಕಳರುಮಿರ್ದ್ದಪ।
ರರರೇ ಸಿರಿ ತೊಲಗೆ ಸೇರರಾರುಂ ಕೆಲದೊಳ್ ॥
ಅರವಿಂದಂ ಬಂಡುಳಿದಿರೆ।
ಭರದಿಂದಂ ಬಳಿಗೆ ಬರ್ಕ್ಕುವೇಂ ಬಂಡುಣಿಗಳ್ ॥ ೯೫ ॥

ಭೀಮಂ.– ಕಾಡಿನೊಳ್ ಅಲೆವುದು ಎಮ್ಮ ಪಣೆಬರೆಪಂ. ಅವರ್ ಏಕೆ ಇಲ್ಲಿಗೆ ಬರವೇಳ್ಕುಂ?

ಧೌಮ್ಯಂ.– ಮಹಾರಾಜನೆ! ನೀಂ ಇಂತು ಪೇಳ್ವುದಾಗದು.

ವೃ॥ ದುಗುಡಂಗೊಂಡಿರುತಿರ್ದ್ದಪಂ ಸುಚರಿತ್ರಂ ನೀನಿಂತು
ಕಾಂತಾರದೊಳ್। ಸುಗುಣರ್ ನಿಮ್ಮನುಪೇಕ್ಷಿಸರ್ ನೃಪವರಾ
ನಿನ್ನಾ ಸುಹೃದ್ಬಾಂಧವರ್ ॥ ಜಗದೊಳ್ ಸನ್ನುತಿವೆತ್ತ ಪಂಕಜ
ಸಖಂ ಬಾಂದಾಣದೊಳ್ ನೋಡೆ ಕ । ಮ್ಮುಗಿಲಿಂದಂ
ಮುಸುಕಿರ್ದ್ದಡೇರಿದರವಂಗೇಂ ಪೂಜೆಯಂಮಾಡರೇ ॥೯೬॥

ಅಂತಲ್ಲದೆಯುಂ ಶ್ರೀಕೃಷ್ಣಪರಮೇಶ್ವರನ ಭಕ್ತರಾದ ನಿಮ್ಮಂ ಬಲ್ಲದ ಸುಜನರಾರ್? (ತಿರುಗಿ ನೋಡಿ) ಮಹಾರಾಜನೆ! ಇದೆನೋಡ. ಸೋಜಿಗವಲ್ತು –ಶ್ರೀಕೃಷ್ಣನ ನಾಮಸಂಕೀರ್ತನಮಂ ಆವೆಸಗುತಿರೆ ಭಗವಂತಂ ಶ್ರೀಕೃಷ್ಣನೇ ತಾನೊಸೆದು ಧೃಷ್ಟಕೇತುಕೇಕಯ ಪ್ರಮುಖರಿಂ ಅರಸರಿಂ ಬಡವೆರಸಿ ಇತ್ತಲ್ ಬಿಜಯಂಗೈಯುತಿರ್ದ್ದಪಂ. ಏಳ್ವುದೇಳ್ವುದು. (ಎಂದೆಲ್ಲರುಮೇಳ್ವರ್)

---

ಪಕ್ಕುವಣಿಗಳುಂ–ನಂಟರೂ; ೯೫ ಬಂಡುಣಿಗಳ್–ತುಂಬಿಗಳು; ೯೬ ಏರದರ್–ದೊಡ್ಡವರು.

(ಬಳಿಕ ಶ್ರೀಕೃಷ್ಣಂ ಪೂರ್ವೋಕ್ತರೊಡನೆ ಪುಗುವಂ.)

ಶ್ರೀಕೃಷ್ಣಂ-(ಧೌಮ್ಯರಂ ನೋಡಿ) ಪೂಜ್ಯರ್ಗೆ ವಂದಿಪೆಂ.

ಧೌಮ್ಯಂ-ವಾಸುದೇವನೆ ! ವಿಜಯಶೀಲನಾಗು.

ಶ್ರೀಕೃಷ್ಣಂ-ಪೂಜ್ಯರೆ! ನಿಮ್ಮ ತಪಂ ಏಳ್ಗೆಯೊಂದುತಿರ್ದಪುದೆ?

ಧೌಮ್ಯಂ-ದೇವನೆ ! ನಿನ್ನ ಕೃಪೆಯಿಂದೆ.

ಯುಧಿಷ್ಠಿರಂ-ವಾಸುದೇವನೆ ! ಆವೆಲ್ಲರುಂ ಕುಂಬಿಡುವೆವು. (ಎಂದೆಲ್ಲರೊಡನಂತುಮಾಳ್ಪಂ).

ಶ್ರೀಕೃಷ್ಣಂ-ರಾಯನೆ ! ಪಿರಿಯಂ ನೀನೆಂತೆನಗೆ ಕುಂಬಿಡುವುದು? ಆಂ ನಿನಗೆ ಕುಂಬಿಡುವೆಂ.

ಯುಧಿಷ್ಠಿರಂ-ದೇವನೆ ಜಗಕೆಲ್ಲಂ ಪಿರಿಯಂ ನೀನಾಗಿರೆ ಎನಗೆ ಅದೆಂತು ಗಡ ಪೆರ್ಮೆ ?

ಶ್ರೀಕೃಷ್ಣಂ-ರಾಯನೆ ! ನಿಮಗೆ ಪದುಳವೇ ಎಂದು ಬೆಸಗೊಳಲುಂ ಮನವೆನತು ಬಾರದು. ಏವೆಂ ? ನಿಮಗಮೀಯೆಡರಾಯ್ತೇ ?

ಯುಧಿಷ್ಠಿರಂ-ದೇವನೆ! ನೀಂ ಅದೇಕಿಂತು ನುಡಿವೈ? ಆಲಿಪುದು –

ಕಂ ॥ ಬಳ್ಳಿತ್ತು ನಿನತ್ತಾಶ್ರಯ ।
ವುಳ್ಳಂ ನಾಂ ಸುಖಿಸುತಿರ್ಪೆ ನೆಡರೊದವಿರೆಯುಂ ॥
ಬಳ್ಳಿಯನಾಶ್ರಯಿಸಿದ ಪೂ ।
ವೆಳ್ಳನಿತುಂ ಕಂದದಲ್ತೆ ಬಿರುವಿಸಿಲಿರೆಯುಂ ॥ ೯೭ ।

ಶ್ರೀಕೃಷ್ಣಂ- ರಾಯನೆ ! ನೀನೆಂದು ಗಡ ಎಡರಡಸಿತೆಂದು ಬಾಯ್ವಿಟ್ಟು ನುಡಿವೈ ? ಎಂದಿಂಗಂ ಇಂತು ನುಡಿವುದು ನಿನಗೆ ಸಾಜವಲ್ತೆ ?

ಭೀಮಂ-(ಆತ್ಮಗತಂ) ನನ್ನಿಯಿದು.

ಯುಧಿಷ್ಠಿರಂ-ದೇವನೆ! ಸರ್ವಜ್ಞನಪ್ಪ ನಿನ್ನ ಅಡಿದಾವರೆಯೆಡೆಯೊಳ್ ಆಂ ಅದೇಂಬಿನ್ನವಿಪೆಂ?

ಕಂ॥ ಗುರುವೊಲ್ ಮಕ್ಕಳ ನೆಮ್ಮಂ।
ಪೊರೆವೆ ಯೊರಲ್ದೊರೆವೆ ಗುರುವೊಲಾಳೋಚನೆಯಂ॥
ಗುರುವೆನಿಪ ಕಾರ್ಯಭರಮಂ।
ಗುರುವೆ ವಲಂ ಪೊರುವೆ ಧನ್ಯರಾಂ ಗಡ ನಿನ್ನಿಂ॥೯೮॥

(ಪಕ್ಕದೊಳಿರ್ದ್ದ ರಾಜರಂ ನೋಡಿ) ಅರಸರ್ಕಳಿರ! ನಿಮಗೆಲ್ಲಂ ಪದುಳಮೆ?

ಧೃಷ್ಟಕೇತು-ಮಹಾರಾಜನೆ! ಎಮ್ಮ ಪದುಳಂ ಏವುದೊ? ದೊರೆವಡೆದ ಧರ್ಮಾತ್ಮರ ನಿಮಗಂ ಇಂತಪ್ಪ ಎಡರಡಸಿತು ಗಡ.

ಧೌಮ್ಯಂ-ಎಲೆ ಧೃಷ್ಟಕೇತುವೆ! ಬಿದಿಯ ಬೆಸನಂ ಮೀರುವರಾರೊ?

ಕಂ॥ ಸುವಿಮಳವಾಜಸಜೊನ್ನಂ।
ಭುವನಮನುರೆಬೆಳಗೆ ಪರಮವೈಭವದಿಂ ಬಾ॥
ಳ್ದವನಿಪವರರೆನಿಬರೊ ಮುಂ।
ವಿವಿಧಕ್ಲೇಶದೊಳೆ ನೊಂದುದಂ ಕೇಳ್ದರಿಯಾ॥೯೯॥

ದ್ರೌಪದಿ-(ವಂದಿಸಿ) ಎಲೆ ಯದುವರೇಣ್ಯಾ! ನಿನ್ನಡಿದಾವರೆಗಳ ಸಂದರ್ಶನದಿಂ ನಿಶ್ಚಿಂತೆಯಾದೆಂ. ಸರ್ವಲೋಕಶರಣ್ಯಾ! ಎನ್ನ ಮೀರಿದ ಬನ್ನಮಂ ನಿನ್ನೊಳಲ್ಲನಂ ಇನ್ನದಾರೊಳ್ ದೂರುವೆಂ?

ವೃ॥ ಸುರಗಾಯಕನುತಬಾಲಕಗುಣಧಾಯಕಚರಿತಾ।
ವರದಾಯಕ ಯದುನಾಯಕ ಸುಮಸಾಯಕವಿನುತಾ॥
ಅರಿದಾರಕ ಘನದಾರಕ ನತದಾರುಕದಯಿತಾ।
ವರರಾಧಿಕ ನಿರುಪಾಧಿಕಕರುಣಾಧಿಕಲಲಿತಾ॥೧೦೦॥

೧೦೦ ಘನದಾರಕ-ಘನತೆಯುಮುಡದಿಯುಮುಳ್ಳವನೆ; ವರರಾಧಿಕ-ಇಷ್ಟೆಯಾದ ರಾಧೆಯುಳ್ಳವನೆ,

ಚ್ಯುತಿಯಿಲ್ಲದ ಮಿತಿಮಿಾರಿದ ಧೃತಿಯಾಸ್ಪದ ಪರಮ ।
ಪ್ರತಿಭೂಸುರಯತಿಶೇಖರಮತಿಭಾಸುರಮಹಿಮಾ ॥
ಶ್ರುತಿಭಾಷಿತತತಿಪೋಷಿತನುತಿಭೂಷಿತಚರಣಾ ।
ಕ್ಷಿತಿಯೊಳ್ ಘನಗತಿಯಾರೆನಗತಿರಂಜನಸುಗುಣಾ॥೧೦೧॥

( ಎಂದು ಕೃಷ್ಣನ ಕಾಲ್ಗಳೊಳ್ ಪೊಡಮಡುತ್ತ)

ದೇವನೆ ! ಲೋಕೈಕವೀರರಪ್ಪ ಪಾಂಡವರ ಧರ್ಮಪತ್ನಿ ಗಡ. ದೊರೆವಡೆದ ಪಾಂಡುಮಹಾರಾಜನ ಸೊಸೆ ಗಡ. ದ್ರುಪದರಾಜನ ಪುತ್ರಿ ಗಡ. ಇಂತಪ್ಪ ಎನಗೆ ಕೌರವಾಧಮಂ ದುಶ್ಶಾಸನಂ ಕಟ್ಟೋಲಗದೊಳ್ ಎನಸುಂ ಮಾನಹಾನಿಯಂ ಎಸಗಿದಂ ಗಡ. ದುರಾತ್ಮರ್ ಆದುರ್ಯೋಧನಾದಿಗಳ್ ಅಂದು ಎನ್ನಂ ನೋಡಿ $ಕೈಪರೆಗುಟ್ಟುತ್ತುಂ$ ಗಹಗಹಂ ನಕ್ಕರ್ ಗಡ. ಇದನೆಲ್ಲಂ ಕಣ್ಣಾರೆ ಕಣ್ಡುಂ ಆರ್ಯಪುತ್ರರ್ ಉಸಿಕಮಿದ್ದರ್ಗಡ.

ವೃ ॥ ನರಗಾಂಡೀವದ ಬಲ್ಮೆಯೇಂ ಕುಸಿದುದೋ ಉದ್ದಾಮನೀ
ಭೀಮನಾ ॥ ವರಬಾಹಾಬಲವುಂ ತೊಳಪ್ಪ ಗದೆಯುಂ ತಾ
ನೆತ್ತಲೆಯ್ದಿರ್ದುದೋ ॥ ನೆರೆದಾಸಭ್ಯರದೆಲ್ಲಡಂಗಿದರೊ ಹಾ
ನಿರ್ಭಾಗ್ಯೆಯೆನ್ನಂ ದಯಾ । ಕರನೇ ನೀನುಪುಪೇಕ್ಷಿ
ಸಿದ್ರ್ಡೆ ಯೆನತ್ತೇನಾಗುತಿರ್ದತ್ತೊ ಬಾಳ್ ॥ ೧೦೨ ॥

ಅಕಟ ! ಪಾಪಿ ದುರ್ಯೋಧನಂ ಜೀವಿಸುತಿರೆಯುಂ ಆರ್ಯಪುತ್ರರ್ ಭೀಮಾರ್ಜುನರ್ ಉಪೇಕ್ಷಿಸುತಿರ್ದಪರ್. ಮುಂ ಕಿಡುಕನವಂ ಬಡರಿಸಿದ $ಅಟ್ಟುಳಿಗಳಂ$ ಅದೇವಣ್ಣಿಪೆಂ ?

ವೃ ॥ ಬಿಸದಿಂ ತಳ್ತನ್ನಮಂ ತಾನುಣಲಿಡಿಸಿದನಾ ಜಾಹ್ನವೀತೀರ
ದಲ್ಲಾ । ಯುಸದಿಂ ನಿದ್ರಾಭರಂಗೊಂಡಿನಿಯನನಕಟಾ ನಿರ್ದ
ಯಂ ನೇಣ್ಗಳಿಂ ಕ ॥ ಟ್ಟಿಸಿ ಬಲ್ಪಿಂ ತನ್ನದೀಮಧ್ಯಕೆ ಬಿಸು
ಡಿಸಿದಂ ನೀಳ್ದ ಕರ್ಮಾವಿಸಿಂ ಕ । ರ್ಚಿಸಿದಂ ಲಾಕ್ಷಾನಿವೇ
ಶಂಬುಗಿಸಿಡಿಸಿದನಂದಗ್ನಿಯಂ ನಟ್ಟಿರುಳ್ ತಾಂ ॥ ೧೦೩ ॥

---

ಕೈಪರೆಗುಟ್ಟುತ್ತ-ಚಪ್ಪಾಳೆತಟ್ಟುತ್ತ.

ಎಡರಿದೆಲ್ಲಮುಂ ನಿನ್ನ ಪಸಾದದಿಂ ಗಡ ಮಾಯಮಾದತ್ತು. ಅದಟಗರ್ ಎನ್ನ ಆರ್ಯಪುತ್ರರ್ ಇದನೆಲ್ಲಂ ದುರ್ಯೋಧನಂಗೆ ಬೆದರಿ ಬೆಬ್ಬಳವೋಗಿ ಸೈಸುತ್ತಿರ್ದಪರ್. ದೇವನೆ! ಪಯಿಂಥಾಸಿನ್ನಡಿಗಳನೇಂ

ಕಂ॥ ಪಿಂದಣ ಪುಟ್ಟನೊಳತ್ತಾ ।
ಸಂದದೆ ಪೊಲ್ಲಮೆಯುನೆಸಗಿವಿಸಟಂ ಬರಿದೆಂ ॥
ಇಂದಿದೊ ನೂರ್ಮಡಿ ಮಿಗಿಲೆನಿ ।
ಪಂದದೆ ಸಂದದರ ಫಳಮನುಣ್ಬಪೆನಲ್ತೇ ॥ ೧೦೪ ॥

ದೇವನೆ! ನಿಮ್ಮ ಆಶ್ರಯದ ಪೆರ್ಮೆ ಎಮಗಿರ್ದೊಡಂ ಎಮ್ಮ ಪುಣ್ಯಮಿರ್ಪನಿತೆ ಗಡ ಎಮಗೆ ಸುಖಸಂಪತ್ತಿ. ಪಾಲ್ಗಡಲ್ ಪಿರಿದಾದೊಡೇಂ? ಪಾತ್ರಯನಿತೆ ಗಡ ಪಾಲ್ ಪಿಡಿಗುಂ.

ಕೃಷ್ಣಂ-ವತ್ಸೆ ದ್ರೌಪದಿ! ಏಳೇಳ. ಇಂತಪ್ಪ ಕೋಟಲೆಗೆ ನೀಂ ಇಂಬಾದೆಯಾ? ಸೈರಿಸಸ್ಸೈರಿಸ. (ಎಂದು ದ್ರೌಪದಿಯ ಕಣ್ಣೀರಂ ಮಿಡಿದು ತನ್ನ ಕೈಪೊಡೆಯಿಂ ಮೆಯ್ಯ ಧೂಳಿಯಂ ಕೊಡಪುವಂ)

(ಎಲ್ಲರುಂ ದುಃಖಮನಭಿನಯಿಪರ್)

ದ್ರೌಪದಿ-ಕಂ॥ ಸಿರಿಯರಸನೆ ನಿನ್ನಡಿದಾ ।
ವರೆಗಳ ಕಾರುಣ್ಯವೆಂಬ ಮಕರಂದಂ ನೀ ॥
ಗಿರೆ ಬಿರುವೇವಸವಸಿವಿಂ ।
ಪರಿತಪಿಪೀಭ್ರಮರಿ ನೆಲದೆ ಬ*ರ್ದುಕುವುದೆಂತೋ ॥ ೧೦೫ ॥

ಕೃಷ್ಣಂ-(ಆತ್ಮಗತಂ)

ವೃ॥ ನಿಡುಗಣ್ ಕಾಡಿಗೆಸಿಂಗರಂಬಿಡೆ ಸಡಿಲ್ದೀಸಾಡೆ ಸೋ ।
ರ್ಮುಡಿ ಮೆಯ್ ನಾರುಡೆಯಿಂದೆ ಕೂಡೆ ರುಚಿರಂ ವಕ್ತ್ರಾಂ
ಬುಜಂ ಬಾಡೆ ಕೇ ॥ ಸಡಿಯುಂ ಕೂರ್ನಡೆಯಿಂ ಪದಂಗಿಡೆ
ಮಹಾವೈರೂಪ್ಯಕೀಡಾಗಿ ತೋ । ರ್ಪ್ಪುದುರಾಜಾನನೆಯುಂ
ವಿಲೋಕಿಸುತೆ ನಿಂದಿರ್ಪ್ಪನದೇಂ ಕ್ರೂರನೋ ॥ ೧೦೬ ॥

---

ಅಟ್ಟುಳಿಗಳಂ-ಹಿಂಸೆಗಳನ್ನು; ೧೦೫ ಬಿರುವೇವಸವಸಿವಿಂ-(ಬಿಟ್ಟಿತು + ಬೇವಸ + ಪಸಿವಿಂ) ಮಹಾದುಃಖವೆಂಬ ಹಸಿವಿನಿಂದ; ೧೦೬ ಕೇಸಡಿ-ಕೆಂಪಗಿರುವ ಕಾಲು;

(ಪ್ರಕಾಶಂ) (ದ್ರೌಪದಿಯಂ ನೋಡಿ) ಎಲೆ ವತ್ಸೆ ! ‡ಅಳ್ಕೆವಿಡು‡

ವೃ ॥ ತುಂಬಿತುಳುಂಕುತುಂ ಪರಿವ ಕಣ್ಬನಿಯಂ ತಡೆ ಯಿಂದು
ನೀ ನದೆಂ। ತುಂ ಬಿಡ ಚಿತ್ತದಲ್ಲಿಡಿದ ದಂದುಗಮಂ ಬರಿ
ದೇಕೆ ಜಂಜಡಂ ॥ ಅಂಬುರುಹಾಕ್ಷಿ ಯಿನ್ನುಡಿವುದೇಂ ತೆಗೆ
ಮುಂಗುರುಳೀಳ್ದು ನಿನ್ನ ಪೀ। ತಾಂಬರಮಂ ಮರುಳ್ದು
ಸೆಳೆದಾಗಳೆ ಕೆಟ್ಟರವರ್ ದುರಾತ್ಮಕರ್ ॥ ೧೦೭ ॥

ನೀಂ ಅಂತು ಅಳ್ಕೆಗೀಡಾಗಿ ಇರ್ಪುದಂ ನೋಳ್ಪುದು ಆರ್ಗಂ ಅಳವ
ಲ್ತು. ಅದರಿಂ ಉಯ್ಯಾಲಾಡುವ ಮಾಸಿದ ನಿನ್ನ ಈ ಸುರ್ಕುಗಂಗುರು
ಳ್ಗಳಂ ನಾಡೆ ನೇರ್ಪಡಿಸು. ಜಳಜಳನೆ ಪೊನಲಿಡುವ ಕಣ್ಣೀರ್ವನಿ
ಗಳಂ ಮೊದಲ್ ನಿಲಿಸು.

ದ್ರೌಪದಿ-ಸತ್ಯಸಂಕಲ್ಪನೆ ! ಆಲಿಸು.

ವೃ ॥ ಎಳೆದೆಳೆದೆನ್ನ ಮುಂಗುರುಳನಾಸಭೆಯೊಳ್ ಬಿಡದೆನ್ನ ಸೀರೆ
ಯಂ। ಸೆಳೆಸೆಳೆದಕ್ಕಟಾ ಮದದೆ ಮಾಂಕರಿಸುತ್ತೆ ನಗುತ್ತೆ
ಸಂಕಟಂ ॥ ಗೊಳಿಸಿದ ಪಾಪಿಯುದ್ಧಳಿತನಾಗೆ ತದಂಗದ
ನೆತ್ತರಿಂ ಕುರು। ಳ್ಗಳ ಹದಗೆಯ್ದು ಸೈತಿಡುವೆ ನಚ್ಯುತ ನಿನ್ನ
ಕೃಪಾಕಟಾಕ್ಷದಿಂ ॥ ೧೦೮ ॥

ಅಂತು ಎನ್ನ ಮನೋರಥತರು ಪಣ್ಣದೆಪೋದೊಡೆ ಆಂ ಇಂತು ಕುರು
ಳ್ಗಳಂ ಕೆದರಿಕೊಂಡಿರ್ಪೆನಲ್ಲದೆ ನನ್ನಿಯಿಂ ಸಿಂಗರಿಸಿಕೊಳ್ವಳಲ್ತು.

ಕೃಷ್ಣಂ-ಎಲೆ ಅಣುಗಿ !

ವೃ ॥ ಖಲರಂ ಸಂಚಿತಪುಣ್ಯಶೇಷಬಲರಂ ಕೌರವ್ಯನೀಚರ್ಕಳಂ।
ಕೊಲಿಸುತ್ತೊಯ್ಯನೆ ತಿಣ್ಣಮಂ ತವಿಸಿ ಭೂಗಾನಂದಮಂ
ಮಾಡುವೆಂ ॥ ನಿಲೆ ನಿಮ್ಮೊಳ್ ಬಳಕಂ ಮಹೀತಳಮಹಾ
ಸಾಮ್ರಾಜ್ಯಸಂಪತ್ತಿ ನಿ। ಸ್ತುಲಭೋಗ ಪ್ರಕರಕ್ಕೆ ಬೀಡೆನಿಸಿ
ನೀವಾನಂದದಿಂ ಬಾಳ್ದಪಿರ್ ॥ ೧೦೯ ॥

ಅಳ್ಕೆ-ಅಳುವಿಕೆ ; ೧೦೭ ಮರುಳ್ದು-ಬುದ್ಧಿಹೀನರಾಗಿ.

ದ್ರೌಪದಿ-ಈಗಳ್ ಎನ್ನ ದುಗುಡಂ. ಅದೇಗಳ್ ನೀಂ ಇಂತು ನುಡಿದಪೈ. ಚತುರಶಿರೋಮಣಿಯಪ್ಪ ನಿನ್ನ ಬಗೆಯಂ ಎಮ್ಮನ್ನರ್ ಎಂತು ನಂಬುವುದು ? ಇಂತು ಜರುಚುವಳೆಂದು ಮನದೊಳ್ ನೀಂ ಬೇಸರುವುದಾಗದು.

ಕಂ|| ಕೋವಿದರೆ ಬಲ್ಲರಲ್ಲದೆ |
ಪಾವನಮಂ ನಿನ್ನ ಭಾವಮಂ ಜಡರರಿಯರ್ ||
ಭಾವಿಸೆ ಪರಮೆಗಳಲ್ಲದೆ |
ತೀವಿದ ತಾಮರೆಯ ಬಂಡನರಿಗುಮೆ ಮೀಂಗಳ್ ||೧೧೦||

ಕೃಷ್ಣಂ-ವತ್ಸೆ ! ನೀಂ ಇಂತು ನುಡಿಯದಿರ.

ಕಂ|| ಅಂಬರ ಮಮನಿಗೆ ಬಿಳ್ದೊಡ |
ಮಂಬುಧಿ ಬತ್ತಿದೊಡ ಮದ್ರಿ ಕದಕದಿಸಿದೊಡಂ ||
ಕುಂಬಿಣಿ ಪೋಳ್ದತ್ತೆನಿಪೊಡ |
ಮಂಬುಜಮುಖಿಯೆನ್ನ ಮಾತು ತೊದಳಾದಪುದೇ ||೧೧೧||

ಅರ್ಜುನಂ-ದೇವಿ ! ಈವಿಷಯದೊಳ್ ಸಂದೆಗವೇತಕ್ಕೆ ? ದೇವನ ನುಡಿಯಿದು ಅದೆಂದಿಂಗಂ ಬೇರೆಯಾಗದು ಗಡ.

ಕೃಷ್ಣಂ-(ಯುಧಿಷ್ಠಿರನಂ ನೋಡಿ) ರಾಯನೆ ! ಆಕಿತವಶಕುನಿಯ ಕವಡುಜೂಜೆ ನಿಮ್ಮಂ ಈ ಕಾಡಿಂಗೆ ಬರಿಸಿತು. ಏಗೆಯ್ವುದು ? ಆನರಿಯದಾದೆಂ. ಅಂದು ಬಳಿಯೊಳಿರ್ದೆನಿಲ್ಲ.

ದ್ರೌಪದಿ-ದೇವನೆ ! ಸರ್ವವ್ಯಾಪಿಯಾದ ನೀಂ ಅಂದು ಬಳಿಯೊಳಿರ್ದೆನಿಲ್ಲವೆಂಬುದೇಂ ? $ ತೊಣನಾಡದ $ ಎಡೆಗಳುಮೊಳವೇ ?

ಕೃಷ್ಣಂ-ವತ್ಸೆ ! ಜೂಜಾದಂದು ಎಮ್ಮ ದ್ವಾರಕೆಯುಂ ದಳವುಳದಿಂ ಮುತ್ತೈಸಿದ ಪಡಿವಕ್ಕದ ಸಾಲ್ವಾದಿಗಳಂ ತುಳಿಲಾಳ್ಗಳಂ ಸದೆದು

೧೧೦ ಪರಮೆಗಳ್-ತುಂಬಿಗಳು ; ಬಂಡಂ-ಮಕರಂದವನ್ನು ; ೧೧೧ ಕುಂಬಿಣಿ -ಭೂಮಿ , ತೊಣಂ-ವಾಯು.

ದ್ರೌಪದಿ-ಆರ್ಯಪುತ್ರಂ ಎಲ್ಲಮಂ ಕೇಳ್ದು ಮಾಮುಸಳಂಗೊಂಡು ಪರಮೇಶ್ವರನ ಚರಣಾನುಗ್ರಹದಿಂ ಅವನಂ ಈಗಳ್ ತತ್ತರಂದರಿವೆನೆಂದು ತಗುಳ್ದಂ. ಬಳಿಕಂ ಆವಿತ್ತಲ್ ತಳರ್ದೆವು. ಅಲ್ಲಿಂದೇನಾದುದೋ ಇನ್ನರಿಯವೇಳ್ಕುಂ.

ಯುಧಿಷ್ಠಿರಂ—ದೇವಾ ಇದೆಕೊಳ್ ನೀಂ ಬಗೆಯುತ್ತಿರ್ಪ್ಪಾಗಳ ವತ್ಸನಕುಲನೀಬಂದಂ.

(ಬಳಿಕ ನಕುಲಂ ಪುಗುವಂ)

ನಕುಲಂ—ದೇವಾ ! ವಂದಿಸುವೆಂ.

ಕೃಷ್ಣಂ—ಕುಮಾರನಕುಲ ! ನೀಂಪೋದಕಜ್ಜಂ ಎಂತಾದುದು? ದೇವಿ ಆದರಡಿಯನೆಲ್ಲಮಂ ಎನಗರಿಪಿದಳ್.

ನಕುಲಂ--ದೇವಾ ! ನಿನ್ನ ಚರಣಾನುಗ್ರಹದಿಂ ವಿಜಯಮಾದುದು.

ಕೃಷ್ಣಂ—ಅದಾವಂ ಆ ಅಳಿಮಾನಿಸಂ ?

ನಕುಲಂ-ಸರ್ವಜ್ಞಮೂರ್ತಿಗೆ ಸಿನಗಂ ಅರಿಯದುದಾವುದೋ ? ಆದೊಡಂ ಬಿನ್ನವಿಪೆಂ. ಅವನ ವೀರವಾದದೊಳ್ ಅವನ ಪೆಸರ್ ದುರ್ವೃತ್ತನೆಂದು ತಿಳಿದುದು. ಅವನಾವನೊ ರಕ್ಕಸಂ.

ಕೃಷ್ಣಂ—ಅಂತಾದೊಡೆ ಅವಂ ದುರ್ಯೋಧನನ ಪ್ರಿಯಮಿತ್ರಂ. ಅವನಿಂ ಪ್ರೇರಿತನಾಗಿಯೆ ನಿಮ್ಮಂ ಬಂಚಿಸಿ ಕೋಟಲೆವಡಿಸಲ್ ಕವ ಹುದವಸಿಯಾಗಿ ಕಾಡಿಂಗೆ ಬಂದಿರ್ದ್ದಂ.

ಯುಧಿಷ್ಠಿರಂ-ಇಕ್ಕ್ಯರ್ಮಿಕ್ಕ್ಯರ್ಂ. (ಎಂದು ಸಿರಮಂ ತೊನೆವಂ)

ದ್ರೌಪದಿ—ದೇವನೆ ! ಪಾಪಿ ದುರ್ಯೋಧನಂ ತಾಂ ಸಾಮ್ರಾಜ್ಯಸುಖದೊಳಿರ್ದೊಡಂ ಕಾಡಿನೊಳಂ ಎಮ್ಮಂ ಇರಗೊಳಿಸಂ ಗಡ.

ಕೃಷ್ಣಂ—ಅಣುಗಿ ! ದುರುಳರ ನಡೆವಳಿಯಿಂತಪ್ಪುದು.

ಕಂ॥ ದುರ್ಜನತತಿ ನಿಜಗುಣಮಂ ।
ವರ್ಜಿಸದುಜ್ಜ್ವಳಿಸುತಿರ್ಪ್ಪ ಪದವಿಯೊಳಿರ್ದ್ದಂ ॥
ನಿರ್ಜರಲೋಕದೊಳಿರೆ ಬೇ ।
ವಾರ್ಜಿತ್ರಮಾಗಿರ್ಪ್ಪ ಕೈಪೆಯಂ ತೊರೆದಪುದೇ ॥೧೧೩॥

೧೧೩ ಕೈಪೆಯಂ-ಕಹಿಯನ್ನು,

ಸಹದೇವಂ– (ಆಗಸದಲ್ಲಿ ನೋಡಿ) ಎಲೆ ಕುರುಕುಲಕಳಂಕ ! ನಿನ್ನ ಬಯಕೆಗಳ್ ಇನ್ನೆಂತಪ್ಪುವೊ ? ಎಮಗೆ ಏನೇನಟ್ಟುಳಿಗಳಂ ಒಡರಿಸಲ್ ತೊಡಗಿದೊಡಂ ನಿನಗೆ ತಣಿವಿಲ್ಲ ಗಡ.

ವೃ॥ ಏಕಚ್ಛತ್ರಾಧಿಪತ್ಯಂ ಘಟಿಸಿತು ಗಡ ನಿರ್ಬಾಧವಾದತ್ತು ರಾಜ್ಯಂ । ಲೋಕಂ ಸ್ವಾಧೀನವಾಗಿರ್ದ್ದಪುದು ನಿನಗೆ ಕರ್ಗ್ಗಾಡೊಳಾವಿರ್ದ್ದೊಡಂ ಹಾ ॥ ಏಕಿನ್ನುಂ ಕೆಟ್ಟುದಂ ನೀನೆಮಗೆ ಬಗೆವೆ ಛೀ ಪಾಪಿ ದುರ್ಯೋಧನಾ ನಿನ್ನ ಕೌಟಿಲ್ಯಂಗಳಂ ತಾನರರೆ ಜಗತಿಯೊಳ್ ಭಾವಿಸಲ್ ಬಲ್ಲನಾವೊ ॥೧೧೪॥

ಭೀಮಂ–ವತ್ಸಾ ! ನಿಲ್‌ನಿಲ್. ಆ ದುರಾತ್ಮನಂ ಏಕೆ ಸಂಬೋಧಿಪಯ್? ಅವನ ಏಕಚ್ಛತ್ರಾಧಿಪತ್ಯಂ ಗೀಕಚ್ಛತ್ರಾಧಿಪತ್ಯಂ ಎನಿತ್ತರೊಳಿರ್ಕ್ಕುಂ ? ಅವನ ರಾಜ್ಯದ ಗೀಜ್ಯದ ವೈಭವಮುಂ ಆಂ ನೋಡದೆ ಪೋಪೆನೇ ? ಪೋಪೋ. ಅವಂಗೆ ದೈನ್ಯದಿಂ ಏಕೆ ಪೇಳ್ವೆ ? ಅವಂ ಎಮಗೇನಂ ಕೆಟ್ಟುದಂ ಗೆಯ್ಯಲಾರ್ಪ್ಪಂ ? ಮುಂದೆಬಂದು ನಿಲಲಾರದ $ಪಂದೆ$ ಪಿಂದೆ ಬರಿದೆ ಕವಡುಮೋಸಂಗಳಿಂದೆ ನಿಗ್ರಹಿಸಲೆಳಪಂ. ಅಂದಿನಿಂದೆಮ್ಮಂ ಬಂಚಿಪುದರೊಳ್ ಅವನ ಜನ್ಮವಾದತ್ತು. ಎಮ್ಮ ಬಾಹತ್ತ್ರದ ಬಾಹುಗಳ ಬಲ್ಮೆಯುಂ ಘನತರವಪ್ಪ ವಾಸುದೇವನ ಅಡಿದಾವರೆಗಳ ಬಲ್ಮೆಯುಂ ಎಮಗಿರೆ ಆ ಕೇಡಾಳಿಯ ದುರಾಲೋಚನೆಗಳ್ ಎಮ್ಮಂ ಏನಲುಗಿಪುವು ?

ಯುಧಿಷ್ಠಿರಂ– ದೇವನೆ ! $ಪ್ರಭಂಜನಂ$ ಮುಗಿಲ್ಗಳಂ ಬಿರ್ರನೆ ನೂಂಕಿ ಪ್ರಭಂಜಿಸುವಂತೆ ನಿನ್ನ ಚರಣಂಗಳ ಧೂಳಿ ಎಮಗೆ ಸಮನಿಸಿದ ಎಡರ್ಗ್ಗಳನೆಲ್ಲಂ ಬಿಡದೆ ವಿಭಂಜಿಕುಂ.

ಕೃಷ್ಣಂ– ರಾಯನೆ ! ಸುಜನರ್ಗ್ಗೆ ಒದವಿದ ಎಡರ್ಗ್ಗಳ್ ತಂತಮಗೆ ತಾಂ ಭಗ್ನವೆನಿಸುಗುಂ. ಅದಿರ್ಕ್ಕೆ. ಆದೊಡೆ ಬಹುಜನಭೂಯಿಷ್ಠವಾದ ಪೊಳಲೊಳ್ ಇರ್ಪ್ಪಂದುಂ ಪೇರಳಲಿಂ ಬರ್ದ್ದಿನಮುಂ

ಪಂದೆ–ಹೇಡಿ. ಪ್ರಭಂಜನಂ–ವಾಯು.

ಬಂದುಯ್ದುಗಗಂತೆಗ್ಗಡೆಕ್ಕುಂ. ಇಂ ಪನ್ನೆರಳ್ಕಾಲಮುಂ ದುಃಖಿತರಿಪರ್ ಅಗಣ್ಯಮೃಗಶರಣ್ಯಮಪ್ಪ ಅರಣ್ಯದೊಳ್ ಎಂತು ಕಳೆವರೆಂದು ಎನ್ನ ಮನಂ ಜಂಜಡದಿಂ ಜಡಮಾಗಿರ್ಕುಂ ಗಡ.

ಯುಧಿಷ್ಠಿರಂ– ದೇವನೆ ! ಆಲಿಪುದು —

ಕಂ॥ ಸತ್ಸಹವಾಸದೆ ಮೋಕ್ಷನತ ।
ವತ್ಸಳನೆಂದೆನಿಪ ನಿನ್ನ ದಯದೆ ಕ್ಷಣಂಬೊಲ್ ॥
ವತ್ಸರಮಂ ಕಳೆವೆಂ ಶ್ರೀ ।
ವತ್ಸಾಂಕನೆ ಮನಕದೇಕೆ ಜಂಜಡವಿದರಿಂ ॥ ೧೧೫ ॥

ಕೃಷ್ಣಂ– ರಾಯನೆ ! ಪರಮೇಶ್ವರನ ಅನುಗ್ರಹಕೆ ಪಾತ್ರರಾದ ನಿಮಗೆಲ್ಲಿಯುಂ ಸ್ವಸ್ತಿ ಸಂಗಡಿಸಿರ್ಕುಂ.

ಯುಧಿಷ್ಠಿರಂ– ದೇವನೆ ! ನಿನ್ನಿಂ ಪೆರನಾವಂ ಪರಮೇಶ್ವರಂ ? ನೀನೆ ಗಡ ಸಾಕ್ಷಾತ್ಪರಮೇಶ್ವರಂ.

ಕೃಷ್ಣಂ– ರಾಯನೆ ! ದ್ವಾರಕೆಯೊಳ್ ಎಲ್ಲರುಂ ನಿಮ್ಮ ಯೋಗಕ್ಷೇಮಮುಮಂ ಅರಿಯಲ್ ಎನ್ನ ಬರವಂ ಕರಂ ಪಾರುತಿರ್ದಪರ್. ಇಂ ತಳ್ವದೆ ನಾವಿಲ್ಲಿಂ ಪೊರಮಡವೇಳ್ಕುಂ.

ಯುಧಿಷ್ಠಿರಂ– ದೇವನೆ ! ನಿಮ್ಮಂ ಅಗಲ್ವುದೆಂತೊ?

ಧೃಷ್ಟಕೇತು– (ಕೃಷ್ಣನಂ ಕುಱಿತು) ದೇವನೆ ! ಇವರಂ ಉಳಿದು ಬರಲ್ ಎಮ್ಮ ಮನಂ ಬಾರದು ಗಡ.

ಭೋಜಂ– (ಯುಧಿಷ್ಠಿರನಂ ನೋಡಿ) ಮಹಾರಾಜ ! ಆವತಿದೂರದೊಳಿರ್ದೊಡಂ ಎಮ್ಮ ಮನಂ ನಿಮ್ಮೊಳೆ ತಾಗಿರ್ಕುಂ. ನೀಂ ಬೇರೆ ಬಗೆಯದಿರ.

ಯುಧಿಷ್ಠಿರಂ– ಅರಸರ್ಕಳಿರ ! ಆ ಅಂತು ಬೇರೆಬಗೆಯೆಂ ಏಕೆನೆ —

ವೃ॥ ನಿಳಯಂಗೊಂಡುದರಣ್ಯಮಧ್ಯದೆ ನವಿಲ್ ಬಾನೊಳ್ ಮುಗಿಲ್ ರಾಜಿಕುಂ । ಪೊಳೆಗುಂ ಮೇಲತಿದೂರದೊಳ್ ದಿನಕರಂ ಕಾಸಾರದೊಳ್ ಸಾರಸಂ ॥ ಎಳೆಯೊಳ್ನೆಯ್ದಿಲಸಲ್ಪದೂರದೊಳ್ ತಾ ರಾರಾಜಿಕುಂ ಚಂದಿರಂ । ಕೆಳೆಯರ್ ದೂರದೊಳೆತ್ತ ವಾಸಿಸಿದೊಡೇಂ ಸಂತೋಷಮಂ ಮಾಡರೇ ॥ ೧೧೬ ॥

ನಿಮ್ಮಂ ಇಲ್ಲಿಂ ಬೀಳ್ಕೊಡಲ್ ಎಮ್ಮ ಮನಂ ಅತ್ಯಾಕುಲವಾಗಿರ್ದಪುದು. ಏಗೆಯ್ವುದು ? ಆವುಂ ಅನತಿದೂರಂ ಬೆನ್ನನೆ ಬಂದಪೆವು.

(ಎಲ್ಲರುಂ ತೆರಳ್ದರ್.)

ಇಂತಿದು ತುರೀಯಾಂಕಂ.



## ಪಂಚಮಾಂಕಂ

—:o—

(ಬಳಿಕೆ ಯುಧಿಷ್ಠಿರಂ ಪರಿಜನದೊಡನೆ ಪುಗುವಂ)

ಯುಧಿಷ್ಠಿರಂ—(ಧೌಮ್ಯನಂ ನೋಡಿ)ಪೂಜ್ಯರೆ ! ಜಗದೊಳ್ ಆವಕೋಟಲೆಯನಾದೊಡಂ ಸೈಸಲಕ್ಕುಂ. ಇಷ್ಟಬಂಧುಗಳಂ ಅಗಲ್ವುದೆಂಬುದು ದುಸ್ಸಹಂ. ಜಗದ್ಬಂಧುವಾದ ಶ್ರೀವಾಸುದೇವನುಮಂ ಮಿತ್ರರಾದ ಭೋಜಾದಿಗಳುಮಂ ಅಗಲ್ದೆನ್ನ ಮನಂ ಇಂದು ಕುದಿಕುದಿಗುಂ.

ಧೌಮ್ಯಂ—ಮಹಾರಾಜನೆ ! ಬಂಧುಜನಂಗಳ ಅಗಲ್ಕೆವೇಗೆಯೆಂಬುದು ದುಸ್ಸಹಮೆ ವಲಂ. ಆದೊಡಂ ಕಾಲಕ್ರಮದಿಂ ಶಾಂತಮಕ್ಕುಂ.

ಯುಧಿಷ್ಠಿರಂ – ಪೂಜ್ಯರೆ ! ಒರ್ಮೆ ಶಾಂತವಾದ ಆಬೇಗೆ ಮಗುಳ್ದು ವಿಜೃಂಭಿಸೆ ತಡೆಯಲಾಗದು ಗಡ.

ಧೌಮ್ಯಂ–ಮಹಾರಾಜನೆ! ದಲ್. ಅಗಲ್ದರಂ ಬಹುಕಾಲಕೆಕಂಡು ಮತ್ತಮವರಂ ಚಣದೊಳ್ ಅಗಲ್ದು ಮನಮುಂ ಬಿಗಿವಿಡಿವುದಾಗರ್ಮರಿದು. ಆದೊಡಂ ನಿನ್ನನ್ನಂ ಧೀರೋದಾತ್ತಂ ಇಂತಪ್ಪನಿರ್ವೇದಕ್ಕೆ ಪಕ್ಕಾಗಂ ಗಡ.

ಯುಧಿಷ್ಠಿರಂ—ಇಷ್ಟಜನದ ಅಗಲ್ಕೆಯೆಂಬುದಿಂತು ದುಸ್ಸಹವಾಗಿರೆ ಈ ಪಾರ್ವರಿನಿಬರ್ ತಂತಮ್ಮ ಪೆಂಡಿರಂ ಮಕ್ಕಳಂ ಅಗಲ್ದು ಎಂತು ಸೈರಿಸುತ್ತಿರ್ದಪರೋ (ಪಾರ್ಶ್ವಗರಂ ಕುರಿತು) ಪೂಜ್ಯರಿರ! ನೀಂ ಇಂದಾನುಂ ಎನ್ನೊಳ್ ಒಸೆದು ಪೊಳಲಂ ಪೊಕ್ಕು ಅನಾಕುಲಂಬಾಳಂ. ಧರ್ಮಜ್ಞರಪ್ಪನೀಂ ಪೆಂಡಿರಂ ಮಕ್ಕಳಂ ತೊರೆದು ಬಂದಿರ್ದಪಿರ್. ನಿಮ್ಮ ಅಗಲ್ಕೆಯಿಂ ಅವಂದಿರ್ ಎಂತು ತಪಿಪರೋ! ಇದು ನಿಮಗೆ ಧರ್ಮವೆ?

ಒರ್ವಂ—ಮಹಾರಾಜನೆ! ಪೊರೆದ ನಿನ್ನಂ ತೊರೆದು ಪೋಪುದು ಧರ್ಮವೆ?

ಎರಡನೆಯವಂ—ಮಹಾರಾಜನೆ! ಬೆಸನಿತ್ತೊಡೆ ನಾವೀಗಳ್ ಪೋಗಿ ಮಡದಿಮಕ್ಕಳಂ ಇತ್ತಲ್ ಉಯ್ವೆವು.

ಯುಧಿಷ್ಠಿರಂ—ಅಕಟ! ನೀವಿಂತು ಕೋಟಲೆಗೊಳ್ವುದು ಸಾಲದೆಂದವರುಮನಿತ್ತಲುಯ್ಯವೇಳ್ಕುವೋ?

ಎರಡನೆಯವಂ—ಮಹಾರಾಜನೆ! ಅಗ್ನಿಹೋತ್ರಿಗಳ್ ಪಲಂಬರ್ ಪಾರ್ವರ್ ಸಕುಟುಂಬರಾಗಿ ನಿನ್ನೆಡೆಯೊಳ್ ಪದುಳಮಿರ್ದಪರ್ ಗಡ. ಅವರ್ಗೇನಾನುಂ ಕೋಟಲೆಯುಂಟೆ?

ಮೂರನೆಯವಂ—ಮಹಾರಾಜನೆ! ನೀಂ ಆರಾಜ್ಯಮುಂ ತೊರೆದು ಬಂದ ಬಳಿಕಂ ನಾಂ ಮರಲ್ದತ್ತಲ್ ಪೋಪುದೆಂದೊಡೇಂ? ಮಡದಿ ಮಕ್ಕಳಂ ತೊರೆದು ಬಂದುದರಿನೆ ಎಮಗೆಂದಿಂಗಂ ಧರ್ಮಚ್ಯುತಿಯಾಗದು. ಆಂ ಅವರ್ಗಳನೊಪ್ಪಗೊಳಿಸಿಯೆ ಬಂದಿರ್ದಪೆವು. ನೀನಿಲ್ಲದ ಆರಾಜ್ಯಕೆ ನಾಂ ಅಡಿಯಿಡಲಾರೆವು.

ಯುಧಿಷ್ಠಿರಂ—ಆನಿಲ್ಲದಮಾತ್ರದಿನೇಂ? ಎನ್ನಿಂ ಮಿಗಿಲೆನೆ ಅರಸಾಳ್ವ ದುರ್ಯೋಧನನಿರ್ದಪಂ. ಆತನಂ ಓಲೈಪುದಾಗದೇ?

ಪಾರ್ವರ್—ಮಹಾರಾಜನೆ! ಏವೇಳ್ದಿ? ಆಂ ದುರ್ಯೋಧನನಂ ಓಲೈಪುದೇ? ನಿನ್ನನುಳಿದು ಹಸ್ತಿನಾವತಿಯೊಳಿರುತ್ತುಂ ದುರ್ಯೋಧನ

ನಂ ಎಂದಿಗಂ ಓಲೈಸಲಾರೆವು. $ ಕಟ್ಟಿರುಂಪೆಗಳ್ $ ಇಂಪಿನ $ ತವ ರಾಜಮನಲ್ಲ $ ರಂಗವಲ್ಲಿಯುಂ ಆಶ್ರಯಿಪ್ಪುವೇ ?

ಕಂ॥ ಬುಧಜನಸಂಗವನುಳಿಯು ।
ತ್ತಧಮನ ಸನ್ನಿಧಿಗೆ ತೆರಳ್ವುದನುಚಿತವೆನಿಕುಂ ॥
ವಿಧಿವಶದಿಂದೊದವಿದನವ ।
ಸುಧೆಯುಂ ಕಳೆದಕಟ ಪೀರ್ವರೇನಂಬಿಲವುಂ ॥೧೧೭॥

ಯುಧಿಷ್ಠಿರಂ-ಎಲೆನೇರಿದರಿರ ! ಮನೆಗಳೊಳ್ ನೀವಿಲ್ಲದ ಬಳಿಕ ನಿಮ್ಮ ಮಡದಿಯರ್ ಮಕ್ಕಳ್ ಪಣಮುಂ ಎಲ್ಲಿಂತಂದು ಮನೆಯೆಸಕಂಗಳಂ ಪಣ್ಣುವರ್ ? ಎನಿತು ಕೋಟಲೆವಡುವರೋ ! ನಿಮಗೆ ಚಿಂತೆಯುಂಟಾಗದಿರದೇ ?

ಎರಡನೆಯವಂ-ಮಹಾರಾಜನೆ! ವದಾನ್ಯಸಾರ್ವಭೌಮನಾದ ನೀಂ ಎಮಗೆ ಇತ್ತ ನಿಸ್ತುಲವಪ್ಪಧನಕನಕಾದಿಸಮಸ್ತವಸ್ತುವಿಸ್ತರಂ ಆಂ ಎಮ್ಮಪುತ್ರರ್ ಪೌತ್ರರ್ ಪ್ರಪೌತ್ರರ್ ಪ್ರಪ್ರಪೌತ್ರರ್ ಉಪಭೋಗಿಸಿದೊಡಂ ಸವೆಯದು. ಇಂತಿರಲೊಡಂ ಆಂ ಎಲ್ಲಿದ್ದೊರ್ಡೇಂ ? ಎಮಗೆ ಚಿಂತೆಯೇಂ ?

ಯುಧಿಷ್ಠಿರಂ-(ಧೌಮ್ಯನಂ ನೋಡಿ)ಪೂಜ್ಯರೆ !

ವೃ॥ ಮನೆಯುಂ ಮಕ್ಕಳನಕ್ಕಟಾ ಮಡದಿಯುಂ ಮೇಣಾಕಳಂ ಧಾನ್ಯಮಂ। ಧನಮಂನೀಗುತೆ ನಿರ್ನರಂ ಪಗಲಿರುಳ್ ಮುಳ್ಕಲ್ಗಿಸಿಲ್ಗಾಗದು ॥ ದಿನವೆಂದೆನ್ನದೆ ಮೇದಿನೀಸುರರಿವರ್ ಘೋರಾಟವೀಮಧ್ಯದ । ಲ್ಲನಿಶಂ ಕೋಟಲೆಗೊಳ್ವುಡೆಂತು ಗಡ ನಾಂ ಕಣ್ಣಾರೆಯಾಲೋಕಿಪೆಂ॥

ನಾಲ್ಕನೆಯವಂ-ಮಹಾರಾಜನೆ ! ಇದೇತಕ್ಕಿಂತು ಮಮ್ಮಲ ಮರುಗುವೈ? ಎಮಗೆ ಕೋಟಲೆಯೇಂ ?

---

ಕಟ್ಟಿರುಂಪೆಗಳ್-ದೊಡ್ಡ ಇರುವೆಗಳು, ತವರಾಜಮುಂ-ಸಕ್ಕರೆಯುನ್ನು.

ಯುಧಿಷ್ಠಿರಂ-ಭೂಸುರೇಂದ್ರರಿರ ! ನೀವಿಲ್ಲಿಯೆ ನೆಲಸಿನಿಂದೊಡೆ ನಿಮ್ಮಮನೆಗಳುಂ ತೋಂಟಂಗಳುಂ $ ಉಂಬಳಿಯು $ ಪೊಲಂಗಳುಂ ಕೆಯ್ವೊಲಂಗಳುಂ ಅನ್ನೆಯದಿಂ ಅನಾಯಕಂಗಳಕ್ಕುಂ ಗಡ.

ಎರಡನೆಯಪೂರ್ವ್ವಂ— ಮಹಾರಾಜೇಂದ್ರ ! ಕೈಲಾಸಂಬೊಲ್ ಕಣ್ಗೊಳುತಿರ್ದ್ದ ಇಂದ್ರಪ್ರಸ್ಥಪುರಮುಮಂ ಸುರೇಂದ್ರಸಭೆಗೆ ಸಾಟಿಯೆಂಬಿನಂ ಮಯಾಸುರಂ ಅಳ್ಕರ್ತು ನಿನಗೆ ಸಮೆದಿತ್ತ ಸಭೆಯುಮಂ ರಾಜೇಂದ್ರಚೂಡಾಮಣಿ ನೀನೆ ತೊರೆದು ಬಂದಿರೆ ನಾಂ ಎಮ್ಮ ಮನೆ ಪೊಲಂಗಳಂ ಪಿಗೆಯ್ವುದು '' ಬಿದಿಯು $ ಬದಸು $ ಅದಾರ್ಗ್ಗಮರಿಯಲರಿದು.

ಅರ್ಜುನಂ-(ವಂದಿಸಿ) ಪೂಜ್ಯರಿರ ! ನೀಂ ಉಮ್ಮಳಿಪ್ಪುದಾಗದು. ಮಹಾರಾಜಂ ಬನವಾಸಮುಂ ಪೂರೈಸಿ ಚೆಚ್ಚರಂ ಪಗೆಗಳಂ ಸದೆದು ತನ್ನ ರಾಜ್ಯಮುಂ ತಾನೆ ಪೊರೆವಂ, ದಲ್. ನಿಮಗೆ ಎಮ್ಮೊಳ್ ಅನಿತು ಹಸಾದವಿರ್ಪ್ಪೊಡೆ ನೀಂ ಇಂತು ನೆಗಳ್ವುದು.

ಪೂರ್ವ್ವರ್-ಕುಮಾರಧನಂಜಯ ! ಅದೆಂತು ? ಬೆಸಸು. ಅಪ್ಪದಾದೊಡೆ ಸಿರದೊಳಾಂತು ನೆಗಳ್ದಪೆವು.

ಅರ್ಜುನಂ-ಪೂಜ್ಯರೆ ! ಬೆಸಸೆಂಬ ಅಂತಪ್ಪ ಎಳ್ತರದ ನುಡಿಯೇಕೆ ? ತಮ್ಮ ಚರಣಸನ್ನಿಧಾನದೊಳ್ ಬಿನ್ನವಿಪೆಂ -ಕೌರವರ್ಗ್ಗಂ ಎಮಗಂ ಮುಂದೆ ಬವರಂ ಸಮನಿಸದೆ ಇರದು. ಆ ಬವರದೊಳ್ ಎಮಗೆಲ್ಲಂ ಗೆಲ್ಲಮನೀವಂತೆ ಅತ್ತಲಿತ್ತಲ್ ಅನುಕೂಲವಪ್ಪ ಪುಣ್ಯಕ್ಷೇತ್ರಂಗಳೊಳ್ ಮಹಾಮಂತ್ರಜಪಂಗಳಂ ಭಗವಂತನಂ ಜಾನಿಸಿ ತುತಿಯಿಸಿ ಬೇಡುವುದು.

ಪೂರ್ವ್ವರ್-ಕುಮಾರಧನಂಜಯ ! ಎಮ್ಮಂ ದುರಾತ್ಮನಪ್ಪ ಆ ದುರ್ಯೋಧನನ ಪತ್ತನಕೆ ಪೋಗಿಮೆನ್ನದೊಡೆ ಸಾಲ್ಗುಂ. ಇಲ್ಲಿಯೆ ಗೆಂಟನೊಳ್ ಆಂ ಗೆಯ್ಯಲ್ ತಕ್ಕ ಗೆಯ್ತಮುಂ ಗೆಯ್ಯಲ್ ತಡೆಯೇಂ ?

---

ಉಂಬಳಿಯು—ಮಾನ್ಯದ, ಬದಸು—ಕೌಟಲ್ಯ

ಅಕ್ಕಕ್ಕೆ (ಯುಧಿಷ್ಠಿರನಂ ಕುರಿತು) ಮಹಾರಾಜನೆ! ಎಮ್ಮಂ ಆದೇಶಿಸು. ಸೋಂಬರಾಗಿ ಬರಿದೆ ಪೊಳ್ತಂ ಕಳೆವುದರಿನೇಂ ಗಡ? ಕುಮಾರನು ಸಿರ್ದಂತೆ ನೆಗಳ್ದಪೆವು. ನಿಮ್ಮ ಸುಶ್ರೇಯಃಪ್ರಾರ್ಥನೆಯಿಂ ಎಮಗೆ ಉಜ್ಜುಗಂ ಪೆರತಾವುದೊ.

ಯುಧಿಷ್ಠಿರಂ—ಪೂಜ್ಯರಿರ! ಅಂತು ನೆಗಳ್ವುದು. ಆದೊಡೆ ಆಂ ಇಂತು ನಿಮ್ಮಂ ಬೇಡಿದಪೆಂ.

ಕಂ॥ ನಿಸಿಯೆನ್ನದೆ ಪಗಲೆನ್ನದೆ।
ಬಿಸಿಲೆನ್ನದೆ ಗಾಳಿಮಳೆಯಿದೆನ್ನದೆ ನಿಮ್ಮಂ॥
ಬಸವಳಿಯಿಪೆನಾನೆಂದುಂ।
ವಸುಧಾದೇವರಿರ! ಸೈಸಿ ಸಲಪುವುದೊಲವಿಂ॥೧೯॥

ಪೌರ್ವರ್_ಮಹಾರಾಜನೆ! ನಿನ್ನಿಯಿಂ ಆಂ ಉಸಿರ್ದಪೆವು. ಆಡವಿಗೆ ಅಡಿಯಿಟ್ಟಂದಿನಿಂದೆ ಎಡರೆಡೆಗೊಂಡುದೆಂದು ಕನಸಿನೊಳಂ ಬಗೆಯೆವು. ಇಂತಿರಲೊಡಂ ಅಡಿಗಡಿಗೆ ನೀಂ ಇಂತು ನುಡಿವುದು ತಕ್ಕುದೆ? ನೀಂ ಎಮ್ಮ ವಿಷಯದೊಳ್ ಎಳ್ಳನಿತುಂ ಚಿಂತಿಪುದಾಗದು. ಇದೆ ನಾಂ ಪೋತರ್ಪೆವು. (ಎಂದು ಪೋಪರ್)

ಯುಧಿಷ್ಠಿರಂ-(ಧೌಮ್ಯನಂ ನೋಡಿ) ಆಂ ಇನ್ನುಂ ಬಹುಕಾಲಂ ಬನದ ವಾಸಿಸವೇಳ್ಕುಂ. ಅದರಿಂ,

ವೃ॥ ಘನಪಾಪಾಪಹಮಪ್ಪ ಪುಣ್ಯಜಳದಿಂದಂ ತಣ್ಣೆಳಲ್ವೆತ್ತ ಪಾ। ವನವೃಕ್ಷಂಗಳ ಪಾಳಿಯಿಂದೆ ಭಗವತ್ಪಾದಾಂಬುಜದ್ವಂದ್ವಪೂ॥ ಜನಯೋಗ್ಯಂಗಳೆನಿಪ್ಪ ಚಾರುತುಲಸೀಬಿಲ್ವಂಗಳಿಂ ಪೂಗಳಿಂ। ವಿನುತಜ್ಞಾನಿಗಳಿಂದಮುಂ ಸೊಬಗುಗೊಂಡಾ ತಾಣವಿನ್ನಾವುದೋ ॥೧೦॥

ಧೌಮ್ಯಂ — ಮಹಾರಾಜನೆ! ನೀಂ ಉಸಿರ್ದುದು ಸಲ್ಗುಂ. ಆದೊಡೆ ಅಂತಪ್ಪತಾಣಂ ಆವುದಿರ್ಕ್ಕುಂ? (ಎಂದು ಚಿಂತೆಯುಂ ಅಭಿನಯಿಸಿ) ಆಃ ಇತ್ತಗೆಂಟನೊಳೆ ದ್ವೈತವನವೆಂಬ ತಪೋವನವೊಂದು ಕಣ್ಗೊಳಿಸುತಿರ್ಪ್ಪುದು. ಅದು ಗಡ ನೀಂ ಬಯಸುವಂತೆ ಬಹುಗುಣಭೂಯಿಷ್ಠಮಾಗಿರ್ಕ್ಕುಂ. ಎಮ್ಮನೆಲೆಗೆ ಆನೆಲಂ ಅನುಕೂಲವೆನಿಸುಗುಂ.

ಯುಧಿಷ್ಠಿರಂ – ಅಂತಾದೊಡೆ ಬಿಜಯಂಗೆಯ್ವುದು. ಅತ್ತಲ್ ಪೋಪಂ. (ಎಂದೆಲ್ಲರೊಡನೆ ಕಿರಿದುದೂರಂ ಪೋಗಿ) ಇದುವೆಗಡ ! ದ್ವೈತವನದ ಒಳಗಣ ತಪೋವನದ ಉಪಾಂತಂ. ಅಹಹ ಅದೇಂ ದರ್ಶನೀಯವಾಗಿರ್ದಪುದೋ! ಅಲ್ಲಲ್ಲಿ ವಿಳಾಸದಿಂ ಪಾರುವ $ ಅಮಳ್ದಲೆವಕ್ಕಿ ಜಕ್ಕವಕ್ಕಿ ಚಾದಗೆವಕ್ಕಿ ಜೊನ್ನವಕ್ಕಿ ಪಂಡಿತವಕ್ಕಿ ಪಡಿಯುರವಕ್ಕಿ ಕೊಳರ್ವಕ್ಕಿ $ ಮುಂತಪ್ಪ ಪಲವುಂ ಪಕ್ಕಿಗಳ ಪಿಂಡು ಕಣ್ಗೆ ಇಂಬಾಗಿರ್ದಪುದು. (ಕಿರಿದುದೂರಂ ಸಾರ್ದು)

ಕಂ|| ಒಂದೆಡೆಯಲರ್ವಳ್ಳಿಗಳಿ |
ನ್ನೊಂದೆಡೆ ತನಿವಣ್ಗಳಿಂದೆ ತೀವಿದ ತರುಗಳ್ ||
ಒಂದೆಡೆ ತಿಳಿಗೊಳಗಳ್ ಪೆರ |
ತೊಂದೆಡೆ ಪಚ್ಚೆಲೆಯ ಬೀಡುಗಳ್ ಕಣ್ಗೊಳ್ಗುಂ||೧-೧||

(ಕಿವಿಗೊಟ್ಟು ಕೇಳ್ದು) ಅನುಮ !! ಈಂಚರವಿದಿತ್ತಲ್ ಸುಶ್ರಾವ್ಯವಾಗಿರ್ದಪುದು.

ಕಂ|| ಅರಲುಣಿಯಾ ಝೇಂಕಾರದ |
ಝುರಿಯುಂ ಕೋಗಿಲೆಯ ಕೊರಲ ರವವೈಖರಿಯುಂ ||
ಅರಗಿಳಿಯ ಲಲ್ಲೆವಾತಿನ |
ಸಿರಿಯುಂ ಕೇಳಲ್ಕದೇಂ ಮನಂಗೊಳಿಸುಗುಮೋ||೧-೨||

(ಮುಂತಣ್ಗೆ ಅಡಿಯಿಟ್ಟು) ಪೂಜ್ಯರೆ ! ಇತ್ತನೋಡಿಂ. ಪುಳಿಲೊಡ್ಡಿನಮೇಲೆ ಅದೊಂದು ಪರಿವಿಡಿಯಿಂ ಕಣ್ಗೊಳ್ವ $ ಅಂಗೊಳಗುಗಳ್ $ ಎಂತು ರಯ್ಯಂಬಡೆದಿರ್ಕ್ಕುಂ ?

---

ಅಮಳ್ದಲೆವಕ್ಕಿ-ಭೇರುಂಡ, ಜಕ್ಕವಕ್ಕಿ-ಚಕ್ರವಾಕ; ಜೊನ್ನವಕ್ಕಿ-ಚಕೋರ; ಪಂಡಿತವಕ್ಕಿ-ಗಿಳಿ; ಪಡಿಯುರವಕ್ಕಿ-ಕೋಗಿಲೆ; ೧-೨ ಅರಲುಣಿ-ತುಂಬಿ. ಅಂಗೊಳಗು-ಹಸುವಿನಹಜ್ಜೆ. ರಯ್ಯ-ರಮ್ಯ.

ಈಚಱದೊಳಟ್ಟ $ಪಚ್ಚಡೆಯುಂ ಪಸಿಯಮೆರಣಮುಂ$ ಅಲ್ಲಲ್ಲಿ ಬಿೞ್ದಿರ್ಪುದರಿಂ ತಪೋವನದ ಧೇನುಗಳ್ ತಂತಮ್ಮ $ಕಂದುಗಳೊಡನೆ ಪುಲ್ಮೇಯುತಿರ್ದು ಈಗಳ್ ಬೆಡಮುಗುೞ್ದಿರ್ಕುಮೆಂದುಬಗೆವೆಂ.

(ಎಲ್ಲರುಂ ಇನಿತು ದೂರಂ ಪೋಪರ್)

(ತೆರೆಯಲ್ಲಿ) ಏಹಿ ಸುವ್ರತ! ಏಹಿ ಸತ್ಯವ್ರತ! ಏಹಿ ಪ್ರಿಯವ್ರತ! ಏಹಿ ಚಾರುವ್ರತ! ಕುತಏವಂ ವಿಲಮ್ಬನ್ತೇ ಭವನ್ತಃ? ಸತ್ವರ ಮಾಗಮ್ಯತಾಂ. ನನು ಸಂನಿಹಿತಾ ತತ್ರಭವತಃ ಕುಲಪತೇಃ ಭಗವದಾರಾಧನವೇಳಾ.

ಯುಧಿಷ್ಠಿರಂ-(ಕೇಳ್ದು) ಇದೇನಿತ್ತಲ್? ಅದಾತರ್ಗೆ ಸಕ್ಕದ ನುಡಿ ಕೇಳ್ಗುಂ.

ಧೌಮ್ಯಂ- ಅಪ್ಪುದಪ್ಪುದು. ಇತ್ತಲ್ ಸರಿಸದೊಳ್ ವಿಭಾಂಡಕಮಹರ್ಷಿಗಳ ತಪೋವನಮಿರ್ಕುಮೆಂದೆಣಿಪೆಂ.

ಯುಧಿಷ್ಠಿರಂ-ಆದೊಡೆ ಆಂ ಅತ್ತಲೆಯ್ದಿ ಆಮಾರಿಸಿಗಳ ಸಂದರ್ಶನಮುಂ ಗೆಯ್ವೆಂ.

ಧೌಮ್ಯಂ-ಅಂತಕ್ಕೆ. (ಎಲ್ಲರುಂ ಕಿಱದು ದೂರಂ ಪೋಪರ್)

ಯುಧಿಷ್ಠಿರಂ-(ನೋಡಿ) ಇವರಾರಿತ್ತಲ್ ಇದಿರ್ವಂದಪರ್? (ಬಗೆದು) ಅರರೆ! ಪರಮತೇಜದಿಂ ತೊಳಗುವ ವಟುಗಳ್ ಮುನಿವಟುಗಳ್. ತಮ್ಮ ಪರಯಕ್ಕೆ ತಕ್ಕಂತೆ ಸಂಭಾರಂಗಳಂ ಪೊತ್ತುಕೊಂಡು ಇತ್ತಲೆ ಬರುತಿರ್ದಪರ್. ಈಚಿಣ್ಣರ್ ಅದೇಂ ದರ್ಶನೀಯರಾಗಿರ್ದಪರೋ! ಒರ್ವಂ ದರ್ಭೆಯ ಕಂತೆಯುಂ ಇನ್ನೊರ್ವಂ ಸಮಿಧೆಯ ಪೊರೆಯುಂ ಮತ್ತೊರ್ವಂ ದುರ್ವೆಯ $ಮೊಗ್ಗರಮುಂ$ ಬೇರೊರ್ವಂ ಮಡಿಸಂಚಿಯುಂ ಆದಿನ್ನೊರ್ವಂ ಪೂದೊಳಚಿಪುಟ್ಟಿಯುಂ ಅದಿ

---

ಪಚ್ಚಡೆ-ಹಸುವಿನ ಹಸಿಯಸಗಣಿ, ಪಸಿಯಮೆರಣ- ಕರುವಿನ ಹಸಿಯಸಗಣಿ, ಕಂದು-ಕರು. ಮೊಗ್ಗರ-ಸಮೂಹ.

ನ್ನೊರ್ವ್ವರ್ಗಂ ಎಲೆಯು ಪಿಂಡಿಯುಂ ಕಂದಮೂಲಂಗಳ ಮೋದುಗಳಂ ಇಂ ಕೆಲಕೆಲರ್ ಇಂ ಕೆಲಕೆಲವುಗಳಂ ಪೊತ್ತಿರ್ಪ್ಪರ್. ಈ ಮಾಣಿಗಳಂ ನೋಳ್ಪೆನಗೆ ಅದೊಂದತಿಶಯಿತಮಪ್ಪನಣ್ಪುಬದವಿಕ್ಕುರ್ಗಂ. ಅಂತಲ್ತೆ -

ಕಂ|| ಸಮವಯಸದ ಸಮರೂಪದ |
ಸಮತೇಜದ ಸಮವಿದಗ್ಧಭಾವದ ಸಮಸ ||
ಚ್ಛ್ಮದೀಪಟುಗಳ್ ವಟುಗಳ್ |
ಸಮಂತದೇಂ ಮನಮನೊಲಿಪರೋ ನೋಟಕರಾ ||೧೩||

(ಬಳಿಕೆ ಅಂತಪ್ಪ ಮುನಿವಟುಗಳ್ ಪುಗುಗುಂ)

ಯುಧಿಷ್ಠಿರಂ-ತೇಜಸ್ವಿಗಳಾದೆಳೆರಿಸಿಗುವರಿರಾ ! ನೀವಾರ್ ? ದಯೆಗೆಯ್ದು ನಿಮ್ಮ ಸಂಗತಿಯುಂ ಅರಿಪುವುದು.

ಮುನಿವಟುಗಳ್-ಆವೆಲ್ಲರುಂ ಕುಲಪತಿಗಳಪ್ಪ ವಿಭಾಂಡಕಮಹರ್ಷಿಗಳ ಶಿಷ್ಯರ್. $ಆಕಲ್ಲಾಯ್ತರ$ ಜಪಹೋಮಾನುಷ್ಠಾನಕೆ ಬೇಳ್ಪ ಸಂಭಾರಂಗಳಂ ತರಲಿತ್ತಲ್ ಪೋಗಿರ್ದ್ದರ್ಪ್ವು. ನೀವೆಲ್ಲರುಂ ಆರೆಂದು ಬೆಸಗೊಳಲ್ ಎಮ್ಮ ಬಗೆ ಮುಂಬರಿಗುಂ.

ಯುಧಿಷ್ಠಿರಂ - ಆವದೊಂದುರಾಯುಬಂಚದೊಳ್ ಪುಟ್ಟಿದರ್. ಅದೊಂದು ದೂಸರಿಂ ಈ ಕಾಡಿಂಗೆ ಬಂದಿರ್ಪ್ಪರ್ವು.

ಮುನಿವಟುಗಳ್-ಇತ್ತಲ್ ಸರಿಸದೊಳ್ ಎಮ್ಮ ಕುಲಪತಿಗಳ ತಪೋವನವಿಕ್ಕುರ್ಗಂ. ನೀವೆಲ್ಲರುಂ ಅತ್ತಲೈದಿ ಪೂಜ್ಯರ ಸಂದರ್ಶನಮುಂ ಕೈಕೊಂಡು ಸತ್ಕೃತರಾಗಿ ಬಿಜಯಂಗೆಯ್ವುದು.

ಯುಧಿಷ್ಠಿರಂ-(ಧೌಮ್ಯನು ಕುರಿತು) ಪೂಜ್ಯರೆ ! ನೋಡಿಂ $ ಈ ಕುರುವರಯದೊಳೆ $ ಪೆರರಂ ಮನವೊಸೆದು ಆದರಿಪ ನಲ್ನಡೆವಳಿಯುಂ ಎಂತು ಕಲ್ತಿರ್ಪರೀತವಸಿಗುಪರರ್ !

ಧೌಮ್ಯಂ-ಮಹಾರಾಜನೆ ! ಇವರ್ಗ್ಗೆ ಇದೆಲ್ಲವುಂ $ ಕಲ್ಲದೆ $ ಬರ್ಪುದು ಗಡ !

---

ಕಲ್ಲಾಯ್ತರ-ಗುರುಗಳ, ಕುರ್ವರಯ-ಚಿಕ್ಕವಯಸ್ಸು, ಕಲ್ಲದೆ-ಅಭ್ಯಾಸಮಾಡದೆ;

ಯುಧಿಷ್ಠಿರಂ—ಎಲೆ ತವಸಿಗುವರರ್ಕಳಿರ! ಆವುಂ ಅವರ ಸಂದರ್ಶನಮಂ ಬಯಸುತ್ತಿರ್ದಪೆವು. ಆ ಮಹನೀಯರೀಗಳ್ ತಪೋವನದೊಳ್ ಇರ್ದಪರಲ್ತೆ?

ಮುನಿವಟುಗಳ್—ಆ ಸಿದ್ಧರ್ ತಪೋವನಮಂ ಉಳಿದು ಎತ್ತಲ್ ಎಯ್ದುವರ್? ಅವರ್ಗೆ ಪೊರಗುಜ್ಜುಗವೇಂ? ಕುಟುಂಬಭರಣದ ಕೋಟಲೆಗಳ್ ಏನಾನುಮಿರ್ಕುಮೆ? ನಗರದ ಆವನಾನುಂ $ ನೆಲಕಲನ $ ಮನೆಯ ಪೆರ್ವಾಗಿಲಂ ಕಾಯವೇಳ್ಕುಮೆ? ಏಗಳುಂ ಎಡವಿಡದೆ ತಪದೊಳ್ ಇರ್ದಪರ್. ಆದೊಡೆ ನೀಮಿನಿಬರುಂ ಅವರ ಸಂದರ್ಶನಮಂ ಕೈಕೊಳ್ವೊಡೆ ಅವಸರಮಂ ಪಾರವೇಳ್ಕುಂ. ಅದರಿಂ ಇದೆ ಕೊಳ್ಳಿಂ ಇತ್ತಲ್ ಕಟ್ಟಿದಿರೊಳ್ ಕಣ್ಗೆಸೆವ ತಪೋವನದ ಪೆರ್ವಾಗಿಲ ಪುದಿಯೊಳ್ ಬಂದು ಮೂರ್ತಂ ನಿಲ್ವುದು. ಮುನ್ನಮತ್ತಲೆಯ್ದಿ ತಕ್ಕವಸರಮಂ ತಿಳಿದು ಬಂದು ನಿಮ್ಮನುಯ್ವೆವು. (ಎಂದು ತೆರಳ್ವರ್)

ಯುಧಿಷ್ಠಿರಂ—ಆವುಂ ಪತ್ತೆಸಾರ್ದು ಆ ಪೂಜ್ಯರ ಸಂದರ್ಶನಕ್ಕೆ ತಕ್ಕವಸರಮಂ ಪಾರುತಿರ್ಪೆಂ.

ಧೌಮ್ಯಂ—ಅಂತಕ್ಕೆ. (ಎಂದೆಲ್ಲರುಂ ಮುಂತಣ್ಗೆ ತೆರಳ್ವರ್)

(ಬಳಿಕೆ ತಪನಿಷ್ಠಂ ವಿಭಾಂಡಕಮಹರ್ಷಿ ಶಿಷ್ಯಪರಿವೃತನಾಗಿ ಪುಗುವಂ)

ವಿಭಾಂಡಕಂ—ಭೋ ವತ್ಸಾಃ! ಕ್ವ ನಾಮ ಸ ಭವ್ಯೋ ಜನಃ ಸತ್ವರಮುಪಾನೀಯತಾಂ.

ಶಿಷ್ಯನೊರ್ವಂ—ಯಥಾಜ್ಞಾಪಯತಿ ಭಗವಾನ್. (ಎಂದು ಪೋಗಿ ಯುಧಿಷ್ಠಿರಾದಿಗಳೊಡನೆ ಮಗುಳ್ದು ಬಂದು) ಎಲೆ ಸೌಮ್ಯರಿರಾ! ಇದೆ ಕೊಳ್ಳಿಮಿತ್ತಲ್ ನಿಮ್ಮಿದಿರ್ $ದಿಮ್ಮಿದರ್$ ನಮ್ಮ ಗುರುವರೇಣ್ಯರ್ ಕಟ್ಟೆಚ್ಚರಿಂ ನಿಮ್ಮ ಬರವಂ ಪಾರುತ್ತಿರ್ದಪರ್. ನೀಂ ಸನ್ನಿಧಿಗೆ ಸಾರ್ವುದು.

ಯುಧಿಷ್ಠಿರಂ—(ನೋಡಿ) (ಧೌಮ್ಯನಂ ಕುರಿತು) ಪೂಜ್ಯರೆ! $ಅರಿಲ್ಗಳ $ ನಡುವಣ $ ನೆರೆವೆರೆಯಂತೆ $ ಶಿಷ್ಯಮಂಡಲಿಯಿಂ ಸುತ್ತುಂಗೊಂಡಿರ್ಪ ಮಹಾತೇಜಸ್ವಿಗಳಿವರ್ ಅದೇಂ ದರ್ಶನೀಯರಾಗಿರ್ದಪರೊ!

---

ನೆಲಕಲನ—ಲೋಭಿಯು, ದಿಮ್ಮಿದರ್—ಘನತೆಯುಳ್ಳವರು, ಅರಿಲ್ಗಳ—ನಕ್ಷತ್ರಗಳ ನೆರೆವೆರೆ—ಪೂರ್ಣಚಂದ್ರ

ಕಂ॥ ಪರತರವಿದ್ಯಾದೇವತೆ ।
ಪುರುಷಾಕೃತಿವೆತ್ತು ಪೊಳೆಗುವೆನಿಸಿಯುವಿಗಳ್ ॥
ಪರಮತಪೋಜ್ವಾಲೆಯದೊಂ ।
ದುರಿವೊಡವುಸಶಾಂತಿಯಿಂದದೇಂ ಶೋಭಿಪರೋ ॥ ೧೨೪ ॥

ಅಕ್ಕ ಸನ್ನಿಧಿಯನೆಯ್ದುವಂ. (ಎಂದೆಲ್ಲರೊಡನೆತ್ತೆಸಾರ್ದು) ಮಹನೀಯರ್ಗೆರಗುವೆವು. (ಎಂದೆಲ್ಲರೊಡನೆರಗುವಂ)

ವಿಭಾಂಡಕಂ-ಎಲೆ ಭವ್ಯರಿರಾ! ನೀಂ * ಜೈವಾತೃಕರೆನಿಸಿ * ಬಾಳಿಂ. (ದ್ರೌಪದಿಯಂ ನೋಡಿ) ಎಲೆ ಪೆಣ್ಮಣಿ! * ನಿಟ್ಟೈದೆಯಾಗಿ * ನೀನೆಯ್ದೆ ಬಾಳ.

ಕಂ॥ ತೇಜೋವಿಶೇಷದಿಂ ರಾ ।
ರಾಜಿಸ ರಾಜಾಧಿರಾಜರೆನಿಪರ್ನೀವಾರ್? ॥
ರಾಜೀವಾಕ್ಷಿಯದಾರ್? ಬನ ।
ರಾಜಿಗದೇವಂದಿ ರುಸಿರ್ವರ್ದೆಲ್ಲಮ ನನುವಿಂ ॥ ೧೨೫ ॥

ಯುಧಿಷ್ಠಿರಂ—ಮಹನೀಯರಾಲಿಪುದು. ಆವೈವರುಂ ಪಾಂಡುಮಹಾರಾಜನ ಪುತ್ರರ್. ಇವರೆಮ್ಮ * ಬಳಿಯೋಜರ್. * ಈಕೆ ಎಮ್ಮ * ಅರವಡದಿ. * ಆಂಗಳ್ (ಅರ್ಧೋಕ್ತಿಯಲ್ಲಿ)

ವಿಭಾಂಡಕಂ-ಪುಣ್ಯಶ್ಲೋಕನೆ! ಸಾಲ್ಗುಂ ಸಾಲ್ಗುಂ. ಇಂನಿರವಿಸದಿರ. ಆಂ ಬಲ್ಲೆವು. ದುರುಳದುರ್ಯೋಧನಾದಿಗಳಿಂ ನೆತ್ತದಾಟದೊಳ್ ಪರಾಜಿತರಾಗಿ ಬನವಾಸಕೆ ಬಂದಿರ್ಪ್ಪರಲ್ತೆ.

ಭೀಮಂ-(ಸ್ವಗತಂ) ಅಹಹ! ಎಲ್ಲಿಯುಂ ದುರುಳನೆಂದೆನಿಪ ದುರ್ಯೋಧನಂ ಏಂ ಧನ್ಯನೋ!

ಯುಧಿಷ್ಠಿರಂ- ಈರೇಳುಂಜಗದಿರವೆಲ್ಲಂ ಅಂಗೈನೆಲ್ಲಿಯೆನಿಸಿರೆ ಮಾತವಸಿಗಳ್ಗೆ ಆನದೇಂಬಿನ್ನವಿಪ್ಪುದು?

---

ಜೈವಾತೃಕರ್-ಆಯುಷ್ಮಂತರು, ನಿಟ್ಟೈದೆ-ದೀರ್ಘಸುಮಂಗಲೆ; ಬಳಿಯೋಜರ್-ಕುಲಗುರುಗಳು; ಅರವಡದಿ-ಧರ್ಮಪತ್ನಿ.

ಽಷ್ಯರ್‌-ಆಮಾಪುರುಸರಿವರೇ ಏಂ ? ಅಕಟಕಟ !!

ದ್ರೌಪದಿ- (ಆತ್ಮಗತಂ) ಧನಕನಕವಸ್ತುಸಂಪದವಿಲ್ಲದೊಡಂ ಎನ್ನಾರ್ಯಪುತ್ರರ್ ಎಲ್ಲಿಯುಂ ಪರವಂಚನಪರಸ್ವಾಪಹಾರಂಗಳಂ ದುರುಳರೆನಿಸಿಕೊಳ್ಳದೆ "ಮಾಪುರುಸರ ಮಾಪುರುಸರ" ಎಂದು ನೆಗಳ್ತೆವಡೆಯುತಿರ್ದಪರ್. ಇದರಿಂ ಎನಗೆ ಅದೊಂದು ಪೆರ್ಮೆಗಡ. ಘನತರಂ ಈಪೆರ್ಮೆಯೆಂಬ ತೊಡಂ ಎನಗಿರಲೊಡಂ ಬಡಲ್ಗೆ ಪೊರೆಯೆನಿಪ ಸ್ಥಿರವಲ್ಲದ ಮುತ್ತಿನ ತೊಡಂಗಳೇಕೆ ?

ವಿಭಾಂಡಕಂ- (ಯುಧಿಷ್ಠಿರನಂ ನೋಡಿ)

ಕಂ॥ ಸುಂದರಮಂದಿರದಲ್ಲಿನಿ ।
ಸುಂ ದರಮುಂದಿರದ ಸೊಗದೆ ಬರ್ದುಕಿದ ನಿಮಗೇ ॥
ನಿಂದೀವರಸುನಯನೆಯೊಡ ।
ನಿಂದೀವರ ಸುನಯ ಕಾಡಿನೊಳ್ ಸಲೆಯಾಯ್ತೇ॥೧೭೬॥

ಅಕಟ ! ರಾಜಾಧಿರಾಜರೆನಿಸಿಕೊಂಡಿರ್ದೊಡಂ ಬನದೊಳ್ ಈಗಳಿನ ನಿಮ್ಮಲಂಕಾರಂಗಳಂ ನೋಳ್ಪೊಡೆ ನಿಮ್ಮಲಂ ಜೋಗಿನಿಬ್ಬೆಯೊಳಪ್ಪ ನಮ್ಮ ಮನಮುಂ ಮಮ್ಮಲಂಮರುಗುಗುಂ.

ಧೌಮ್ಯಂ-ಸುಜ್ಞರಿರ ! ಬಿದಿಯಾಣತಿ ಬಲವತ್ತರವಲ್ತೆ. ಅದಾರ್ಗೆತಾನೇ ಮೀರಲ್ಕೆ ಬಕ್ಕುಂ ? ಆವಪೊಳ್ತಿಂಗೆ ಅದೇನಾಗವೇಳ್ಕುವೋ ಅದಾಗದೆಪೋಗದು. ಕಡಲೆಗೆ ಬಾಯ್ದೆರೆದು ಕಡಿವಾಣಕ್ಕೆ ಬಾಯ್ಮುಚ್ಚಿದೊಡಾಗುವುದೇ ? ಈ ಸಂಸಾರದೊಳ್ ಸುಖದುಃಖಂಗಳೆರಡುಮಂ ಅನುಭವಿಸವೇಳ್ಕುಂ.

ವಿಭಾಂಡಕಂ-ಭಕ್ತವತ್ಸಳಂ ಭಗವದ್ವಾಸುದೇವಂ ನಿಮ್ಮಂ ನಿಚ್ಚಮುಂ ಬೆಂಗೊಂಡು ಕಾಗುಂ. ನಿಮಗೇನೂಣೆಯುಂ ? ನಿಮಗುದ

---

೧೭೬. ಸುಂದರಮಂದಿರದಲ್ಲಿ, ಇನಿಸುಂ + ದರಂ + ಅಂದು + ಇರದ ಸೊಗದೆ-ಆಗ ಸ್ವಲ್ಪಭಯವಿಲ್ಲದಸುಖದಿಂದ, ಇಂದೀವರಸುನಯನೆಯೊಡನೆ-ನೈದಿಲೆಯಂತೆ ಶೋಭನವಾದ ಕಣ್ಣುಗಳುಳ್ಳ ದ್ರೌಪದಿಯೊಡನೆ; ಇಂದು-ಈಗ, ಈವರ-ದಾನಶೀಲರೊಳಗೆ; ಸುನಯ-ಒಳ್ಳೆಯ ನೀತಿಯುಳ್ಳವನೇ ! (ಇದು ಏಳಕ್ಷರಗಳ ಯಮಕ.)

ರ್ಗಸಂಪದಂ ತಪ್ಪದೆ ಸಮನಿಸಕ್ಕುಂ. ಇನ್ನೇಕೆ ಬರಿದೆ ಉಮ್ಮಳಿಪ್ಪುದು? ಇದೆಕೊಳ್ಳಿಂ ಇತ್ತಲ್ ಎಮ್ಮ ಎಲೆವನೆಯ ಪಡುಗಡೆಯೊಳ್ ಕಣ್ಗೆ ವಪ್ಪ ಸರಸ್ವತೀನದಿಯ ತಡಿ ನಿಮ್ಮನೆಲೆಗೆ ತಕ್ಕುದಾಗಿರ್ಕ್ಕುಂ. ನೀವ ತ್ತಲ್ ಸಂತವಿರುತ್ತುಂ ಅಂದಂದು ಎಮ್ಮೆಡೆಗೆ ಬಂದು ಕಾಣಿಸಿ ಕೊಳ್ವುದು.

ಯುಧಿಷ್ಠಿರಂ—ಮಹಸೀಯರೆ ! ತಮ್ಮ ಪರಮಾನುಗ್ರಹದಿಂ ಧನ್ಯ ರಾದೆವು. ಬೆಸನೀವುದು. ಆವತ್ತಲ್ ತಳರ್ವೆವು.

ವಿಭಾಂಡಕಂ—ಮಹಾರಾಜನೆ ! ಆನುಸಿರ್ದ ನಲ್ನುಡಿಗೇ ಇಂತು ನೀಂ ಕೂಂಡುಕೊನೆವುದು ಸತ್ಪುರುಷಂಗೆ ನಿನಗೆ ಸಾಜಂ ಎಂತೆನೆ.—

ಕಂ|| ಸಿರದೆ ಕಸಂದೆಗೆದೊಡೆ ಸ |
ತ್ಪುರುಷರದಂ ಕೋಟವಿತ್ತಪಿತ್ತವೊಲರಿವರ್ ||
ಹರಣಂದೆರುತ್ತವೊಲ್ದುಪ |
ಕರಿಸಿದೊಡಂ ಪಗೆತನಂಬೊಲೆಣಿಸರ್ ಜಾಲ್ಮರ್ ||೧೨೭||

ಒಳ್ಳಿತು. ನೀಂ ತೆರಳ್ವುದು. ನಿಮಗಕ್ಕೆಮ ಅಗ್ಗಳದಾಯುಂ ಶ್ರೀಯುಂ. (ಶಿಷ್ಯರಂ ನೋಡಿ) ನದೀಕೂಲಮುಪಸರಾಮೋ ವಯಂ ಚ ಮಾಧ್ಯಂದಿನಾಯ ನಿಯಮಾಯ. (ಎಂದು ಶಿಷ್ಯರೊಡನೆ ತೆರಳ್ವಂ)

ಯುಧಿಷ್ಠಿರಂ— ಪೂಜ್ಯರೆ ! ಅಪರಿಚಿತರಾದೊಡಮೀತಪಸಿಗಳ್ ಅಪ್ರಾರ್ಥಿತರಾಗಿ ಎಮಗೊಸೆದು ಎಮ್ಮಂ ಅಣಿಯರಂ ಸಂತವಿಟ್ಟರಲ್ತೆ.

ಧೌಮ್ಯಂ— ಮಹಾರಾಜನೆ ! ಮಹಾತ್ಮರ ನಡೆವಳಿಯೆ ಇಂತ ಹುದು. ಆಲಿಸು,

ವೃ || ಪರಿಚಯಮಿಲ್ಲ ಯಾಚನೆಯುಮಿಲ್ಲನುಬಂಧಮುಮಿಲ್ಲವಾ
ದೊಡಂ | ಪರಮುದಯಾಳುವಪ್ಪ ಸುಜನಂ ಪೆರರುಮ್ಮಳಮಂ
ನಿವಾರಿಪಂ || ಉರಿವಿಸಿಲಿಂದೆ ಮೇದಿನಿ ಪಗಲ್ ಪರಿತಾಪಮನಾಂ
ಪುದುಂ ನಿಶಾ | ಕರನುರೆ ತಣ್ಪನಿತ್ತಪನದಾರವನಂ ಜಗ
ದಲ್ಲಿ ಬೇಳ್ಪರೋ || ೧೨೮ ||

ಯುಧಿಷ್ಠಿರಂ- ಇಂತಪ್ಪ ಮಾತಪಸಿಗಳ ಪರಮಾನುಗ್ರಹದಿಂ ಎಮಗೀಯಡವಿಯುಂ ಕರಂ ಶ್ರೇಯಸ್ಕರಮಾಗಿರ್ಕ್ಕುಂ. ಆ ಮುನಿಕುಲಚೂಡಾಮಣಿಗಳ್ ತೋರಿದ * ಸರಸತಿದೊರೆಯಕರೆಗೆ * ಪೋಪಂ. (ಎಂದೆಲ್ಲರೊಡನೆ ಸ್ವಲ್ಪದೂರಂ ಸಾರ್ದು) ಅಹಹ! ಇದುವೆಗಡ ಸರಸತಿ ಪೊಚ್ಚಂ. ಅಚ್ಚವಪ್ಪನೀರ್ ನಿಚ್ಚಂ ತೊಳತೊಳತೊಳಗೆ ತಪೋವನಶ್ರೀ ತಾಂ ತೊಟ್ಟದೊಂದು * ರನ್ನನೇವಾಳವಚ್ಚಂಬೊಲ್ * ರಂಜಿಪುದು. ಥಳಥಳಿಪ ಅಮರ್ದುಸಲೆಗಳಂ ಅಮರ್ದ ನದೀಕೂಲವಿದು ಎಮ್ಮ ನಿವಾಸಕ ಅನುಕೂಲವೆಂದೆಣಿಪೆಂ.

ಧೌಮ್ಯಂ- ಅನುಕೂಲತಮಮೆಂದೆಣಿಸಲಕ್ಕುಂ. ಇದೆಕೊಳ್ ಸುತ್ತಲ್ * ಪಡ್ಡಳಿ ಪಾದರಿ ಗರಿಪೂ * ಅದಿರ್ಗಂತಿ ಮೊಲ್ಲೆ ಮಲ್ಲಿಗೆ ಜಾದಿ ಸಂಪಗೆ ಪಸುರ್ದನ ಕನ್ನರ್ಯ್ದಿಲ್ ಚೆಂಸೆಯ್ದಿಲ್ ಮರುಗಂ ದವನಂ ಬಕುಳಂ ಬಂಧುಗೆ * ಸಿರಿಸಂಮುಂತಪ್ಪ * ಕಮ್ಮಲರ್ಗಳ್ ಸರಿಸದೊಳ್ ಸುರಸಮಾಗಿ ಪರಿರಂಜಿಕುಂ ನಿಟ್ಟಸರಸ. ಅತ್ತಲ್ ಅರಸೇರಿಲ್ ಬಕ್ಕೆವಲಸು * ಸಿರಿಗಂ ಚೆಂದೆಂಗು ಕಾಂಗು ದಾಳಿಂಬಂ ಬಾಳೆ ಕಿತ್ತಿಳೆ ಪೇರೀಳೆಮುಂತಪ್ಪಫಲತರುಗಳುಂ ಕಣ್ಗೆಡ್ಡಮಾಗಿಸಂದಣಿಸಿರ್ಕ್ಕುಂ. ಇತ್ತನೋಡು. ಮರಂಗಳಮೇಲೆಯೆ ಮಡಲ್ದು ಘನತರಮಪ್ಪ ಪಣ್ದೊಂಗಲ್ಗಳಿಂ ಇಂಬಿಡಿದ * ಮುದ್ದಿಗೆಯ ಕಾವಣಂಗಳ್ * ಕಣ್ಗೊಳ್ಗುಂ. ಅರರೆ! ಪಟ್ಟಣದ ಆರವೆಗಳೊಳ್ ಸೊಬಗಿಂಗೆಂದು ಯತನದಿಂ ತಂದು ತರತರದೆ ನಟ್ಟುಬೆಳೆಯಿಸಿದ ತರತರದ ತರುಗಳಂ ಇಲ್ಲಿಯ ಚಲ್ವಿನ ತರುಗಳ್ಗೆ ನಿವಳಿಸವೇಳ್ಕುಂ.

ಯುಧಿಷ್ಠಿರಂ—ಪೂಜ್ಯರೆ! ತಾವುಸಿರ್ದುದು ನಿಕ್ಕುವಂ.

---

ಸರಸತಿದೊರೆಯ ಕರೆಗೆ—ಸರಸ್ವತೀನದಿಯತೀರಕ್ಕೆ; ರನ್ನನೇವಾಳವಚ್ಚಂಬೊಲ್—ರತ್ನದ ಹಾರರೂಪವಾದ ಆಭರಣದಂತೆ, ಪಡ್ಡಳಿ—ಕಣಗಲೆ, ಅದಿರ್ಗಂತಿ—ಇರುವಂತಿಗೆ ಸಿರಿಸಂ—(ಶಿರೀಷ)ಬಾಗೆಹೂ, ಕಮ್ಮಲರ್ಗಳ್—ಸುವಾಸನೆಯುಳ್ಳ ಹೂಗಳು, ನಿರಿಗಂ—[illegible] ಮುದಿ ಗೆಯಕಾವಣಂಗಳ್—ದ್ರಾಕ್ಷೆಯ ಚಪ್ಪರಗಳು

ಕಂ॥ ಪೊನಲಿದು ಸುತ್ತಲ್ ಪರಿಗುಂ ।
ತನಿವಣ್ಣ್ಗೆಂಪಿದೆತ್ತಲುಂ ಮಗಮಗಿಕುಂ ॥
ಘನವೀತಣ್ಣೆಳಲಿತ್ತಲ್ ।
ಮನಮೀಳ್ಗುಂ ಚೆಲ್ವಿದೂರೊಳೇಂ ಸಮನಿಪ್ಪುದೇ॥೧೨೯॥

ಧೌಮ್ಯಂ–ಮಹಾರಾಜನೆ! ತಣ್ಣೆಲರ ತೀಟದಿಂ ಬಗೆಗೊಳ್ವ ಈತಣ್ಣೆಳಲ್ಗಳ ಎಡೆಯೊಳ್ ಎಲ್ಲರುಂ ಕುಳ್ಳಿರ್ದ್ದು ಇನಿತು ವಿಶ್ರಾಂತಿಯನೆಯ್ದುವಂ.

ಯುಧಿಷ್ಠಿರಂ–ಅಂತಕ್ಕ. (ಎಂದೆಲ್ಲರೊಡನೆ ಕುಳ್ತು) ಪೂಜ್ಯರೆ! ಇತ್ತ ನೋಡಿಂ.

ಕಂ॥ ಪೊಳದಡದೊಳ್ ಮೊಳತು ಮನಂ ।
ಗೊಳಿಪೀತೃಣತತಿಯು ಜನ್ಮಮಿದುಮುಂ ಸಫಳಂ ॥
ಜಳದೊಳ್ ಮುಳುಗುತ್ತುಂ ಬಾ ।
ಗುಳಮಂ ತಳೆದರ ಕರಾವಲಂಬನಮಕ್ಕುಂ ॥ ೧೩೦ ॥

ಧೌಮ್ಯಂ–ಮಹಾರಾಜನೆ! ಈ ತೃಣತತಿಗಂ ಕೀಳಾದೆನಾನೆಂದು ಚಿಂತಿಪೆಯೇಂ? ರಾಜ್ಯಶ್ರೀ ನಿನ್ನಂ ಕೆಲದಿನಂ ಅಗಲ್ದಿರೆ ನೀನೇಕೆ ಚಿಂತಿಸಿದಪ್ಪೆ? ನೀಂ ಲೋಕೈಕಾವಳಂಬನನಲ್ತೆ. ಜಯಶ್ರೀ ನಿನ್ನಂ ತಳ್ವದೆ ಸೇರ್ದಪಳೆಂದೆನಗೆ ತೋರುಗುಂ. ಇದೆನೋಡು § ಮೀಂಬಟ್ಟೆಯೊಳ್ § ತಮ್ಮ § ತಿಪ್ಪುಳ್ಗಳಂ § ನೀಡಿ ಗುಡಿಕಟ್ಟಿ ಸಂಚರಿಸುತಿರ್ಪ್ಪ ರಾಯಂಚೆಗಳ್ ನೀಳ್ದ ನೇಸರ್ಗ್ಗದಿರೆಂಬ ದಂಡಂ ಕಣ್ಗೊಳುತ್ತಿರೆ ನಿನಗೆ ಬೆಳ್ಗೊಡೆಯನಾಗಿಪುವು. ಮಾಮರಂಗಳ ಸೆಳೆಗೊಂಬ ನಡದು ಉಯ್ಯಾಲಾಡುತೆ ಪುಗಲ್ಪುಗಲೆಂದು ಕುಕಿಲ್ವ ಪಡಿಯರವಕ್ಕಿಗಳ್ ನಿನಗೆ ಗಾಯಣಮಂ ಕೇಳಿಪುವು. ಕುಹಕುಹಮೆನ್ಬ ಸಾರಸ

ಮೀಂಬಟ್ಟೆ–ನಕ್ಷತ್ರಮಾರ್ಗ; ತಿಪ್ಪುಳ್–ಹಕ್ಕಿಯ ಗರಿ. ತುಪ್ಪುಳ್–ಪಕ್ಕಿಯ ರೋಮ.

ಪಕ್ಕಿಗಳುಂ ಚಿಲಿಮಿಲಿಯೆಂಬ ಪಕ್ಕಿವರಿಗಳುಂ ವಂದಿಮಾಗಧರಂತೆ ನಿನಗೆ ಜಯಘೋಷಮಂ ಉಗ್ಘಡಿಕುಂ. ಇತ್ತಲ್ ಇದಿರೊಳ್ ಪೀಲಿಗಳಂ ಪಸರಿಸಿಕೊಂಡು ಕೊಂಡುಕೊಸೆದು ಕೇಗುಗಳಂ ಪಾಡುತೆ ಬೆಡಂಗಿನಿಂ ನಲ್ದು ನರ್ತಿಸುವ ಮಯೂರಿಗಳ್ ನಿನಗೆ ಪೆಕ್ಕಣಮಂ ತೋರುಗುಂ. ತೊಂಡುಗೆಡೆವ ಪುರುಳಿಗಳ್ ಕರ್ದುಂಕಿದ ಇನಿವಣ್ಗಳ ಬಿತ್ತುಗಳೊಡನೆ ಕಳಿವಣ್ಗಳಂ ಮರಗಳ ಮೇಲಣಿಂ ಜಗುಳಿಸುತ್ತಿರೆಯಿರೆ ದ್ವಿಜವೃಂದಂ ವೇದಮಂತ್ರಮಂ ಪಾಡುತೆ ನಿನಗೆ ಸಿರದೊಳ್ ಸೇಸೆಯಿಕ್ಕಿ ಫಲಸಮರ್ಪಣಂಗೆಯ್ವಂತಿರ್ಕುಂ. ಪಲತೆರದ ಪಕ್ಕಿಗಳಿತ್ತಲ್ ಉದಿರಿಸಿರ್ಪ ಮೆಲ್ದುಪ್ಪುಳ್ಗಳಂ ನೆಲಂ ಬಾಸಣಿಸಿರೆ ಕುಳ್ಳಿರಲ್ ಮೆಲ್ಪಿನ ಚಿತ್ರಕಂಬಳಮಂ ಪಾಸಿದಂತೆಗಡ ಕಾಣ್ಗುಂ. ಬಳ್ಳಿವೆಣ್ಗಳ್ ನಿನ್ನಂ ನೋಡಿ ಉತ್ಫುಲ್ಲಭಾವದಿಂ ಪೂವಲಿಗೆದರುತಿರ್ಕುಂ.

ಭೀಮಂ-(ಆತ್ಮಗತಂ) ಇಂತಪ್ಪ ರಾಜಭೋಗಂ ಕಾಡಿಂಗೆ ಬಂದರ್ಗ್ಗಲ್ಲರ್ಗ್ಗಮುಂಟು. ಎಮ್ಮ ಅರಸುತನಂ ಇಂತು ಉತ್ಪ್ರೇಕ್ಷಾಲಂಕಾರದೊಳಾದತ್ತುಗಡ.

ಯುಧಿಷ್ಠಿರಂ-ಪೂಜ್ಯರೆ! ಎನ್ನ ಮನಮಂ ಸಂತವಿಡಲ್ ನೀಂ ನುಡಿದ ನುಡಿಯುಮಂ ಆಂ ಪರಮಾರ್ಥವೆಂದೆ ಬಗೆವೆಂ. ಏಕೆನೆ ನಿಮ್ಮನ್ನರ್ ಮಹನೀಯರ ವದನಾರವಿಂದದತ್ತಣಿಂ ಬಸರ್ವ ವಾಙ್ಮಧುವೆಂದುಂ ನಿಸ್ಸಾರಮಾಗದುಗಡ. ಇದಿರ್ಕೆ. ಅರಸುಗೆಯ್ವ ಕೌರವರ ಇರವಂ ಅರಿತುಬಾರೆಂದು ಆಂ ದೂದಟ್ಟಿದ ಕಾರುಣಿಕವೆಸರ ಬೇಹುಕಾರಂ ಅದೇಕೆ ಇನ್ನೆವರಂ ಬಾರಂ?

ಧೌಮ್ಯಂ-(ತಿರುಗಿನೋಡಿ) ಮಹಾರಾಜನೆ! ಇದೆಕೊಳ್ ಇತ್ತಲ್ ನೋಡು. ನೀಂ ನೆನೆಯುತಿರ್ಪ್ಪಗಳೆ ಆತಂ ಬಳಿಸಾರ್ದಂ.

(ಬಳಿಕೆ ಕಾರುಣಿಕಂ ಪುಗುಗುಂ)

ಕಾರುಣಿಕಂ – (ಪೊಕ್ಕು) ಮಹಾರಾಜಂಗೆ ವಿಜಯಮಕ್ಕೆ (ಎಂದು ವಂದಿಪಂ).

ಯುಧಿಷ್ಠಿರಂ-ಎಲೆ ಕಾರುಣಿಕನೆ! ನಿನಗೆ ಸಾಸಿರ್ವರಿಸಮಾಯ್ತು. ಈಗಳೆಗಳ ನಿನ್ನ ಪೆಸರಂ ಎತ್ತಿ ಮಾತಿಂಗೆ ಮೊದಲಿಕ್ಕಿದೆಂ. ಬಾರಿತ್ತಲ್ ಕುಳ್ಳಿರ. ಏಕಿಂತು ನಿನ್ನ ತಳ್ವಿದುದಾಯ್ತು ?

ಕಾರುಣಿಕಂ-ಈ ಕಾಡಿನೊಳ್ ತಮ್ಮ ನೆಲೆವೀಡಂ ಅರಿಯದೆ ಅರಸುತಿರ್ದೆಂ.

ಯುಧಿಷ್ಠಿರಂ-ಅಕಟ ಕಷ್ಟಂ ಕಷ್ಟಂ! ನೀಂ ಈ ಪೞುವಿನೊಳ್ ಎಂತೆಂತು ಅಲೆದು ಬಲ್ಬಳಲ್ದೆಯೋ!

ಕಾರುಣಿಕಂ-ಮಹಾರಾಜನೆ! ನಿನ್ನ ಚರಣಾನುಗ್ರಹದಿಂ ಎನಗೆ ಬಳಲ್ಕೆಯಿನಿತುಮಿಲ್ಲಂ. ನಿನ್ನನ್ನಂ ಮಹಾರಾಜನ ಸೇವೆ ಎನಗೆ ದೊರೆತುದು ಅಗ್ಗಳವಲ್ತೆ.

ಯುಧಿಷ್ಠಿರಂ-ಒಳ್ಳಿತು. ಇರ್ಕೆ. ಅತ್ತಣ 'ಪಡೆಮಾತೇಂ' ಅವಂದಿರ ಎಣಿಕೆ ಎಂತಪ್ಪುದು ? ಎಲ್ಲಮಂ ಮಾಂಜದೆ ನಿರವಿಸು.

ಕಾರುಣಿಕಂ-(ಬಿನಯದಿಂ ಕುಳ್ಳಿರ್ದು) ಮಹಾರಾಜನೆ! ಅರಿಯಲರಿದೆನಿಪ ಪಗೆರಾಯರ ನಡೆವಳಿಯೆಲ್ಲಿ! ಎಮ್ಮನ್ನರ್ ಕಾಲುರಿಚರ ಅರಿವೆಲ್ಲಿ! ಆದೊಡಂ ಗಾವಿಲಂ ನಾಂ ನಿನ್ನ ಪೆರ್ಮೆಯಿಂದಮೆ ಅರಿವುದಂ ಇನಿತು ಅರಿತು ಬಂದಿರ್ಪೆಂ. ಅಭಿಜ್ಞನಾದ ನಿನ್ನ ಮುಂದೆ ಆಂ ಬಂದೆರಳ್ಮಾತುಗಳಂ ಆಡುವುದು ಪಾಲ್ಗಡಲ ಮುಂದೆ 'ದಮ್ಮಣಿಯುಂ'* ಎಸಗಿದಂತಕ್ಕುಂ ಅಂತಲ್ಲದೆ ನಿಮ್ಮನ್ನರ್ ಪಂಡಿತರ ಮುಂದೆಡೆ ಬೆಳ್ಳಕ್ಕರಿಗರೆಮ್ಮನ್ನರ ನುಡಿವುದೆಂತೊ! ಏಕೆನೆ --

ಕಂ|| ಪಂಡಿತವರನಂ ದೂರದೆ ।
ಕಂಡೊಡನೆಯೆ ಜಡನ ನುಡಿಯುಡಂಗುಗುಮೊಡಲೊಳ್||
ಚಂಡಕರಂ ಮೂಡೆ ತಮೋ ।
ಮಂಡಲಮಾಗಸದೊಳೆಂತು ಮೇಂತೋರುಗುಮೋ || ೧೩೧ ||

---

ಪಡೆಮಾತು-ಸುದ್ದಿ, ದಮ್ಮಣಿಯುಂ-ಅರವಟ್ಟಿಗೆಯುಂ.

ಯುಧಿಷ್ಠಿರಂ-ಕಾರುಣಿಕನೆ! ನೀನಳ್ಕದೆ ದಿಟ್ಟದಿನುಸಿರ್.

ಕಾರುಣಿಕಂ-ಮಹಾರಾಜನೆ! ಅಂತಾದೊಡೆ ಆಲಿಸು.

ಕಂ॥ ಸ್ವೈಜೋಕ್ತ್ಯಿಯನುರೆ ನಂಬುವ।
ರಾಜರ ಬಂಚಿಸರೆ ಚಾರರೆಮ್ಮನ್ನರ್ ಮಾ॥
ರಾಜನ ನೀತಿಜ್ಞರ್ಗಂ।
ರಾಜಾನಶ್ಚಾರಚಕ್ಷುಷಃ ಎಂದುಸಿರ್ಗುಂ ॥ ೧೩೭ ॥

ಅದರಿಂ ಆಂ ಅರಿವುಳ್ಳನಿತುಂ ಅರಿತುದಂ ನಿಮ್ಮಡಿಯೆಡೆಯೊಳ್ ಅರಿಕೆಗೆಯ್ವೆಂ. ಅದು ನಿಮಗೆ ಬಗೆವೊಕ್ಕಪುದೊ ಬಗೆವುಗದೊ? ನೀ ಮದನಾಲಿಸಿ ಕನಲದಿರವೇಳ್ಕುಂ.

ಯುಧಿಷ್ಠಿರಂ-ಎಲೆಭದ್ರನೆ! ಅರಿತುದಂ ಅರಿಕೆಗೆಯ್ಯೆ ನಿನ್ನ ಮಾತಿಂಗೆ ಕನಲ್ವುದರಿನೇಂ? ಎಳ್ಳನಿತುಮಳ್ಕದೆ ನೀಂ ಉಳ್ಳುದಂ ಅರಿಪು.

ಕಾರುಣಿಕಂ-ಮಹಾರಾಜನೆ! ಆರ್ಯಮಹಾಶಯರೆನಿಪ ನಿಮ್ಮ ಪರಿಯೆ ಬೇರೆ. ತುಂಬಿದ ಕೊಡಂ ತುಳುಂಕುಗುಮೇ? ಮಹನೀಯರಾದ ನಿಮ್ಮಿಂದಮೆಗಡ ಜಗಂ ನಿಂದಿಕ್ಕುರ್ಗಂ.

ಯುಧಿಷ್ಠಿರಂ-ಎಲೆ ಕಾರುಣಿಕನೆ! ಎಮ್ಮನ್ನರೆನಿಬರೊ ಜಗದೊಳ್. ಎಮ್ಮನೇವೊಗಳ್ವೆ?

ಕಾರುಣಿಕಂ-ಮಹಾರಾಜನೆ! ನಿಮ್ಮನ್ನರ್ ಗುಣಿಗಳ್ ಜಗದೊಳ್ ಕೆಲಕೆಲರೆ. ಎಂತೆನೆ —

ಕಂ॥ ಗುಣಶಾಲಿಗಳತಿವಿರಳರ್।
ಗುಣಹೀನರೆನಿಪ್ಪ ಮನುಜರೆನಿಬರೊ ಜಗದೊಳ್॥
ಮಣಿಮಯಶಿಲೆಗಳ್ ದುರ್ಲಭ್।
ವೆಣಿಪೊಡೆ ನೆಲಸಿಕ್ಕುರ್ಗಮೆಲ್ಲಿಯುಂ ಕಾಳ್ಕಲ್ಗಳ್॥ ೧೩೮ ॥

೧೩೮-ಕಾಳ್ಕಲ್ಗಳ್-ಕಾಡುಕಲ್ಲುಗಳು.

ತಮ್ಮ ನಲ್ನುಡಿಯಿಂ ಅನುಗೃಹೀತನಾದೆಂ. ಪಿನ್ನವಿಪ್ರದಂ ಬಸೆದಾಲಿಪ್ಪುದು. ಆ ಕಾರವಂ ಜೂಜಿನೊಳ್ ಅಂದು ನಿಮ್ಮತ್ತಣಿಂ ಪಡೆದ ಪೊಡವಿಯುಂ ಇಂದದೊಂದು ತೆರದಿಂ ತನ್ನ ಬಸಕೆ ಕೊಂಡು ಜಗದೊಳ್ ತಾಂ $ ಬಿರ್ತಳೆಯುರಸಂ $ ಆಗವೇಳ್ಕುಮೆಂದು ಬಗೆವಗೆಯುಎಸಕಂಗಳಂ ಎಸಗುತಿರ್ದಪಂ. ಅಳವಿಗಳೆದ ದಳಮುಂ ಅಳ್ಗವಡಿಸುತಿರ್ದಪಂ.

ಕಂ॥ ಆತನ ಗಂಜನೆಯೋ ಪೆರ।
ತಾತನ ನಡೆನುಡಿಯೆ ಪೆರತು ಪೆರತಾಬೆಸನುಂ॥
ಆತನ ಜಾಣುಂ ಪೆರತೆನೆ।
ಯಾತನ ಪೊಸಪರುತವಣೆಯನೇವಣ್ಣಿಸುವೆಂ ॥ ೧೩೪ ॥

ವೃ॥ ಬಿನಯಕೆ ಬೀಡು ಬೀರಕೆ ತವರ್ವನೆ ಬಿಜ್ಜೆಗದೊಂದಡಪ್ಪವೂ। ಬಿನದಕೆ ಬಿತ್ತುಜಾಣ್ಗೆ ನೆಲೆಸತ್ತ್ವಪೆಗಾರವೆ ದೇಸಿಗಿಂಬುಸೊಂ॥ ಪಿನ ನಯಕಾಗರಂ ದಿಟಕೆ ಕಾಳ್ಗಡೆ ಚಾಗಕೆ ಪಳ್ಕೆಯೀತನೆಂ। ದೆನ ಜಸಜೊನ್ನದಿಂ ಜಗತಿಯಂ ಬೆಳಗಲ್ ತೊಡಗುತ್ತುಮಿರ್ದಪಂ ॥ ೧೩೫ ॥

ಯುಧಿಷ್ಠಿರಂ.—ಇದಿರ್ಕ್ಕೆ. ದೇಶಸ್ಥಿತಿಯೆಂತಿರ್ಕ್ಕುಂ ದೇಶೀಯರೆಂತಿರ್ದಪರ? ಇದಂ ನಿರವಿಸು.

ಕಾರುಣಿಕಂ.—ಮಹಾರಾಜನೆ! ಆಲಿಸು. ದೇವಡಿಗರ್ ಸದಾಚಾರಸಂಪನ್ನರಾಗಿ ನಿಚ್ಚಮುಂ ಪ್ರಾತಸ್ಸಂಗವಾದಿಷಟ್ಕಾಲಂಗಳೊಳ್ $ ಸಡ್ಡೆಗೊಂಡು $ ನಿಯಮದಿಂ ದೇಗುಲಂಗಳೊಳ್ ಪೂವಡಿಗರ್ ತಪ್ಪದೆ ತಂದರ್ಪಿಸುವ ತರತರದ ಪಲಸಾಸಿರ್ವರುವೂಗಳಂ ದೇವರಂ ಪೂಜಿಸುತ್ತುಂ ಅರಸಂಗೆ ಸ್ವಸ್ತಿಯುಂ ಆಶಾಸಿಪರ್. ದೇಶದೊಳ್

---

ಬಿರ್ತಳೆಯುರಸಂ-ಏಕಚ್ಛತ್ರಾಧಿಪತಿ, ೧೩೫ ಕಾಳ್ಗಡೆ-ದಿಂಬು, ಪಳ್ಕೆ-ಹಾಸಿಗೆ; ಸಡ್ಡೆ-ಶ್ರದ್ಧೆ.

ಲ್ಲಿಯುಂ ಆವುದರ್ಕ್ಕಂ ಸುಂಕಮುಂ ಕೊಳ್ಳದ ಕತದಿಂ ಸುಂಕಿಗರ ಸುದ್ದಿಯೆ ಇಲ್ಲಂ. ಆತ್ರನ ಆಸ್ಥಾನಸಚಿವರೊಳ್ ಆರುಂ ಲಂಚಗರೆಂದುಂ ಲಂಚವಣಿಗರೆಂದುಂ ಲಂಚಂಗುೞಿಗಳೆಂದುಂ ಪೆಸರ್ವಡೆಯದಿರ್ದ್ದಪರ್. ಪಟ್ಟಣಿಗರ್ ಮೋಸಕಾರರ್ ಪುಸಿಗರ್ ಜೂದಾೞಿಗಳೆನಿಸದೆ ಎಲ್ಲರುಂ ಸದ್ವಿಷಯದೊಳ್ ಓದಾೞಿಗಳ್ ಕಟ್ಟೋಲಗದೊಳ್ ಮಾತಾೞಿಗಳ್ ಕಾೞ್ಗಯ್ತಂಗಳೊಳ್ ಸಿಗ್ಗಾೞಿಗಳ್ ಎನಿಸಿರ್ಪ್ಪರ್. ಎಲ್ಲರುಂ ಉದ್ಯೋಗಿಗಳೆನಿಸಿರ್ಪ್ಪರಲ್ಲದೆ ಊಟವಣಿಗರೆನಿಸಿ ಸೋಂಬರಾಗಿರರ್.

ವೃ॥ ಅರಸಂ ಸಿಪ್ಪೊಸತ್ರಪ್ಪಕೃತ್ರಿಮಗುಣಗ್ರಾಮಂಗಳಂ ಕಣ್ಗೊಳು ।
ತ್ತಿರೆ ದೇಶೀಯರೊರಲ್ದುಕೊಟ್ಟಜಗಳಂ ತಾಂ ಕಾಲದೊಳ್
ಕೊಟ್ಟಪರ್ ॥ ಸಿರಮಂಬಾಗುವರಾತನಾಣತಿಗೆ ಮಾಸಾಮಂತ್ರರಾ
ಯರ್ಕ್ಕಳಾ । ಸಿರಿಯುಂ ಪೆರ್ಮ್ಮೆಯುನಾಬೆಡಂಗನನುವಿಂದಾ
ಗುಣ್ಪನೇವಣ್ಣಿಪೆಂ ॥ ೧೪೬ ॥

ಯುಧಿಷ್ಠಿರಂ—ಅರಮನೆಯ ಆಸ್ಥಾನದಪೆರ್ಚ್ಚುಗೆಯೇಂ? ಪೇೞ್.

ಕಾರುಣಿಕಂ—ಮಹಾರಾಜನೆ! ಆಲಿಪುದು $ ವರಳಚರ $ ಬಂಗಳಚರ್ ನೇಪಳಚರ್ ಕಾಶ್ಮಿರಿಚರ್ ಬಾಹ್ಲಿಕಿಚರ್ ಕಾಂಬೋಜಿಚರ್ ಕನ್ನಡಿಚರ್ ಮುಂತಪ್ಪ ಮೂಡಣ ಪಡುವಣ ತೆಂಕಣ ಬಡಗಣ ಮಾಸಾಮಂತ್ರರ್ ಸಂತತ್ರಮುಂ ವೆಗ್ಗಳದ ಬಗೆವಗೆಯ ಕಾಣ್ಕೆಗಳಂ ಕೊಂಡು ಬಂದೋಲಗಿಸುತಿರ್ದ್ದಪರ್. ಭಂಡಾರಿಗರ್ ಜಾಳಿಗೆವೊನ್ಗಳಂ ಇಡಲ್ ಭಂಡಾರದೊಳ್ ಎಡೆ ಸಾಲದೆಂದುಂ ಬೇರೆಡೆಯುಂ ತೋರವೇೞ್ಕುಮೆಂದುಂ ಬಂದು ಬಿನ್ನವಿಸುತಿರ್ದ್ದಪರ್. $ ದೂಸಿಗರ್ $ ದವಸಿಗರ್ ಕಾಯಿಗರ್ ಪಣ್ಣಿಗರ್ ತಂಬುಲಿಗರ್ ಮುಂತ್ರಪ್ಪರ್ ಸರ್ವಕಾಲಂಗಳೊಳಂ ಸರ್ವಸಂಭಾರಂಗಳಂ ಸಜ್ಜುಗೆಯ್ದು ರಾಜಮಂದಿರದೊಳ್ ಬತ್ತೊತ್ತಿನಿಂ ನಿಗುಂಬಿಸುತಿರ್ಪ್ಪರ್. ಸುತ್ತಲುಂ ಸಮಕಟ್ಟಿದ ಕಟ್ಟಾಣಿಮುತ್ತಿನ ಲಂಬಣಂಗಳ್ ಬಳಸಿದ $ ಮೀಂಗಳ $ ನೆರವಿಯೆನೆ,

೧೪೬ ಕೊಟ್ಟಜ—ಕಪ್ಪ; ವರಳಚರ್—ವರಾಳದೇಶದಲ್ಲಿರುವವರು, ದೂಸಿಗರ್—ಜವಳಿಯಂಮಾರುವವರು, ಮೀಂಗಳ—ನಕ್ಷತ್ರಗಳ್,

ಬಳಗೆ ನಡುವಣಿಂದ್ರನೀಲವಿಳಸಿತವಪ್ಪ ಕೀಲ್ ಕರೆಯೆನೆ ನಟ್ಟನಡುವೆಯಿಂಬುವಟ್ಟ ಮಿಸುಪ ಮಿಸುನಿಯ ದಂಡಂ ಇಳಿಯಲ್ ನಟ್ಟಳವಟ್ಟ ಇಳಿಯುಂಗಂಬವೆನೆ, ತನ್ನ ಬಳಿಯ ರಾಯನ ಓಲಗದ ಏಳ್ಗೆಯುಂ ನೆಟ್ಟನ ಸಿಟ್ಟಸಲ್ ಆಸೆವಟ್ಟು ಪೊಡವಿಗೆ ಅಂಬರದಿಂ ಇಳಿದು ಮುಟ್ಟಯಿಸಿ ಬಂದು ನಿಂದ ತಣ್ಗದಿರನ ಮಂಡಲವೆನೆ ಮಂಡಳಿಸಿದ ಝಗಝಗಿಪ ರನ್ನದ ‡ಮೇಘಡಂಬರಂ‡ ಆಡಂಬರದಿಂ ಒಪ್ಪುತಿರೆ, ಇರ್ಪಕ್ಕದೊಳ್ ಒಯ್ಯ್ಯರದಿಂ ಇಕ್ಕುವ ಬಿಳಿಯಚಾಮರಂಗಳ್ ನಗೆದು ನಡೆಪಾಡುವ ನಿಜಭುಜಪ್ರತಾಪಕೀರ್ತಿಹಂಸಿಗಳನೆ, ತೊಟ್ಟ ತರತರದ ಝಗಝಗಿಪ ತುಡುಗೆಗಳುಂ ಉಟ್ಟ ಮಿರುಮಿರುಗುವ ನಲ್ಲುಡುಗೆಗಳುಂ ಇಟ್ಟ ನೊಸಲ ಸೊಬಗಿನ ಕತ್ತೂರಿಯ ಬೊಟ್ಟನಿಂ ಕಣ್ಗೊಳಿಸುತ್ತುಂ ‡ಪಟ್ಟವಣೆಯಂ‡ ಅಟ್ಟಾಸದಿಂ ಏರಿ ರಂಜಿಸುವಾತನ ಕಟ್ಟೋಲಗದ ಕಟ್ಟಲೆಸಿರಿಯುಂ ಏನೆಂಬೆಂ! ಸನ್ನಿಧಿಯ ಊಳಿಗದವರ್ ಇರ್ಪಕ್ಕದೊಳಂ ‡ರನ್ನಗಾಳಂಜಿಗಳಂ‡ ಇಕ್ಕೆಲ್ಗಳೊಳಂ ಪಿಡಿದುಕೊಂಡು ನಿಂದಿರ್ಪರ್. ಪಡಿಸಣಿಗರ್ ಪಾಷ್ಥಾವಧಾನವುಂ ಪರಿಷ್ಕಾರದಿಂ ಪೇಳುತ್ತುಂ ಪಾದಾರವಿಂದಂಗಳಂ ಒತ್ತುತಿರ್ಪರ್. ಕೈವಾರಿಗಳ್ "ಜಯಜಯ ಕುರುಕುಲರತ್ನಾಕರರಾಕಾಸುಧಾಕರ ಮಹಾರಾಜೇಂದ್ರಸಾರ್ವಭೌಮ" ಎಂದು ಪರಿಪರಿಯಿಂ ಪರುರವಣೆಗೊಂಡು ಪಜ್ಜೆವಜ್ಜೆಗೆ ಪೊಗಳುತಿರ್ದಪರ್.

ಭೀಮಂ-(ಆತ್ಮಗತಂ) ಇನ್ನೇಂ? ಆರುಮಿಲ್ಲದೂಗೆ ಈ ಮಡಿವಳತಿ ಮಾಳಯೋ ಮುತ್ತೈದೆ.

ಯುಧಿಷ್ಠಿರಂ-ಆಸ್ಥಾನಮಂ ಆರಾರ್ ಅಲಂಕರಿಸುತಿರ್ದಪರ್?

ಕಾರಣಿಕಂ-ಅವಧರಿಪುದು. ಬಂದೆಡೆ ಮದ್ದಳಿಗರ್ ‡ಸರವಂದಿಗರ್‡ ಬೀಣೆಗರ್‡ ಗಾಣರ್‡ ಪೆಕ್ಕಣದ ಪೊಸಹುಗಾರ್ತಿಯರ್ ನೆರೆದ ಜನದ ನೆರವಿಯ ಕೊಡಂಕೆಗಳ್ ಮರ್ದಿಂ ಸೂಸುತೆ ಸಿರಂಗಳಂ ತೊನೆ

---

ಮೇಘಡಂಬರ– ಛತ್ರ, ಪಟ್ಟವಣೆ– ಸಿಂಹಾಸನ, ರನ್ನಗಾಳಂಜಿ– ರತ್ನದ ಪೀಕದಾನಿ, ಸರವಂದಿಗರ್– ಸ್ವರಬಂಧವಂ ರಚಿಸುವರು, ಬೀಣೆಗರ್– ವೀಣೆಯಂ ನುಡಿಯಿಸುವರು, ಗಾಣರ್–ಹಾಡುವವರು.

ಯಿಪರ್. ಒಂದೆಡೆ ಬಾಗರಣಿಗರ್ ತರ್ಕಿಗರ್ ಒಂದೆಡೆ ಜೋಯಿಸಿಗರ್ ಗಣಿದಿಗರ್ ಸಿದ್ಧಾಂತಿಗರ್ ಒಂದೆಡೆ ಕಬ್ಬಿಗರ್ ಚಾಪದಿಗರ್ ಒಂದೆಡೆ ಬೆಲ್ಲೋಜರ್ ಓಲಗದ ಮೊಗಸಾಲೆಯಂ ಅಳಂಕರಿಸುತಿರ್ದ್ದಪರ್. ಅಂತುಮಲ್ಲದೆ ಒಂದೊಂದೆಡೆಗಳೊಳ್ ನಾವಿಲರ್ ಘೋಳಾಯಿಲರ್ ಪದಯಿಲರ್ ಪಚ್ಚಯಿಲರ್ ಪಡೆವಳ್ಳರ್ ಸೆಜ್ಜವಳ್ಳರ್ ಮಡಿವಳ್ಳರ್ ಅಡಪವಳ್ಳರ್ ಅಡುವಳ್ಳರ್ ಅಚ್ಚಳಾಯ್ತರ್ ಝಳಂಬಾಯ್ತರ್ ಕಡಂಗಾಯ್ತರ್ ಸೂಳಾಯ್ತರ್ ಮುಂತಪ್ಪರ್ ಆವಚಣದೊಳ್ ಆವಬೆಸನಕ್ಕುಮೋ ಎಂದು ಕೈಗಟ್ಟಿಕೊಂಡು ಪರಿವಿಡಿಯಿಂ ಪ್ರಭುವಿನ ಪಸಾದಮಂ ಪಾರುತಿರ್ಪ್ಪರ್.

ಭೀಮಂ—ಆರ್ಯನೆ! ತೆಗೆತೆಗೆ. ನಿನಗೆ ಗೆಯ್ವಗೆಯ್ತಮಿಲ್ಲಂ. ಆ ಕೌರವಾಧಮನ ಸಂಗತಿಯಂ ನೀಂ ಏನೆಂದು ಗಡ ಬಿಲ್ಲಂಬೆರಗಾಗಿ ಕಿವಿಯಾರೆ ಕೇಳ್ದಪೆ? ಆ ದ್ರೋಹಿಯೆನಿತು ವೈಭವದಿಂ ಬಾಳ್ದೊಡಮೇನೊ? ಅವನಗ್ಗಳದೈಸಿರಿ ಪೋಪ್ಪೋ ಎನಿತರೊಳಕ್ಕುರ್ಗಂ. (ಕಾರುಣಿಕನಂ ನೋಡಿ) ಎಲವೊ ಕಾರುಣಿಕ? ಏಳೇಳ್ ಸಾಲ್ಗುಂ. ಕತೆಯ ಪುರುಳ್ ಕಿರಿದಾದೊಡಂ ಬಿತ್ತರದ ಬಿನ್ನಣದ ಬಣ್ಣನೆಯಿಂ ಮಿಣ್ಣನೆ ಬೆಡಂಗುವಡೆವ ಕಬ್ಬಿಗನ ಕಬ್ಬಮಂ ಪೋಲ್ವ ನಿನ್ನ ಗರಗರಿಕೆಯ ನುಡಿಯ ಗಡಣಮಂ ಮಾಣ್ಮಾಣ್. $ ಆ ತುಡುಗುಣಿಯ $ ಯೋಗ್ಯತೆಯಂ ಆವರಿಯದರೇ? ನೀನಡಂಗಿಸದೆ ಇಲ್ಲದುದುಮಂ ಏನೆಂದು ಅಡ್ಡಗಲದಿಂ ಕಡಂಗಿ ಬೆಡಂಗಿನಿಂದೆ ಬಣ್ಣಿಸುತಿರ್ದ್ದಪೆ? ನಿಲಿಸುನಿಲಿಸು.

ಯುಧಿಷ್ಠಿರಂ—ವತ್ಸಾ? ಇದೇನೆಂದು ನಿರ್ನ್ನರಂ ಕಾರುಣಿಕಂಗೆ ಕನಲ್ವೆ? ನಿಲ್ ನಿಲ್. ಇಂತು ಬಲ್ಗಡಸಿನಿಂ ನುಡಿವುದೇ? ಕನಲದೆ ಆಲಿಪುದೆಂದು ಮೊತ್ತಮೊದಲೆ ಬೇಡಿಕೊಂಡನೀತಂ.

---

ನಾವಿಲರ್—ಹಡಗುನಡೆಯಿಸುವರು, ಘೋಳಾಯಿಲರ್—ಕುದುರೆಸವಾರರು, ಪದಯಿಲರ್—ಸ್ಥಾನವನ್ನು ಏರ್ಪಡಿಸುವರು, ಪಚ್ಚಯಿಲರ್—ಒಡವೆಗಳನ್ನಿಡುವವರು, ಝಳಂಬಾಯ್ತರ್—ಬೀಸಣಿಗೆವಿಡಿವವರು, ಕಡಂಗಾಯ್ತರ್—ಉತ್ಸಾಹಗೊಳಿಸುವವರು, (ಖುಷಿಮಾಡುವವರು) ಸೂಳಾಯ್ತರ್—ಸರಬಯುವರು (ಅಥವಾ ಅರಿಕೆಮಾಡುವವರು.) ತುಡುಗಣಿ—ನಾಯಿ,

ಭೀಮಂ-ಆರ್ಯನೆ ! ಆದೊಡೇಂ ಈತನ ನುಡಿವೊನಲ್ಗೆ ತಡಿಯೇ ಇಲ್ಲವೆ ?

ಕಾರುಣಿಕಂ-ಕನಲ್ವುದಾಗದು. ಆಂ ಅರಿಪುವುದನೆಲ್ಲಮಂ ಅರಿಪಿದುದಾಯ್ತು. ಪಲವಾತಿನೇಂ ? ಕವಡುನುಡಿಯಿಂ ಕೊರ್ವಿರ್ಪ್ಪ ಕೌರವನವಂ ನಿಮಗೆ ಮಚ್ಚರಿಸುತೆ ಜಗದೊಳ್ ನಿಮ್ಮ ಪ್ರಸಕ್ತಿಯುಮಂ ಸೈರಿಸಲಾರಂ.

ಯುಧಿಷ್ಠಿರಂ-ಕವಡೇಂ ? ಸಾಜವೇಂ ? ಎಂತಾನುಂ ಲೋಗರ ಮಚ್ಚಿಂಗೀಡಾಗಿ ಅರಸುಗೆಯ್ಯುತಿರ್ದ್ದಪನಲ್ತೆ. ಅದು ದಲ್ ಅಭಿನಂದನೀಯಂ. ಎಮಗೆ ಮಚ್ಚರಿಪುದಾತಂಗೆ ಪ್ರಕೃತಿಸಿದ್ಧಂ. ಪ್ರಕೃತಿ ಮೀರಲ್ಕೆ ಬರ್ಕ್ಕುವೆ ? ಅದರಿನೆ “ ಪ್ರಕೃತಿರ್ದುಸ್ತ್ಯಜಾ ” ಎಂದಪರರಿತರ್. ನೀನೆಮಗೆ ಬಂಬಲ್ಬಳಲ್ದೆ. ಅಕಟ ? ಏಗುವೆಂ ? ಪೊನ್ನ ಕಡಗವೋ ? ರನ್ನನೇವಾಳವೊ ? ಮಾಣಿಕದುಂಗುರವೋ ? $ ಜಾಗವರಲ ಸೀಸಕವೇ ? $ ಮಿಸುನಿವೆಸದ $ ಸವಗವೋ ? ಕೆಂಬರಲ ಪದಕವೋ ? ಮುತ್ತಿನೆಕ್ಕಸರವೋ ? ಏನೆನ್ನೊಳರ್ಕ್ಕುಂ ? ಇಂದಕಟ ತಕ್ಕ ಮೆಚ್ಚಂ ನಿನಗೆ ಕುಡಲಿಲ್ಲದೆ ರಿಕ್ತಟಂ ಕಳಿಪವೇಳ್ಕುಮಲ್ತೆ.

ಕಾರುಣಿಕಂ-ಮಹಾರಾಜನೆ ! ಕವಡಿಲ್ಲದ ಕಟ್ಟೆರಕದ ನಿನ್ನ ಸವಿನುಡಿಗಳ್ಗೆ ಸಾಟಿಯೆನಿಪ್ಪ ಮೆಚ್ಚಿನ್ನದಾವುದೋ ? ಪೆರತೇವುದೊ? ಆನಿದರಿನೆ ಸತ್ಕೃತನಾಗಿರ್ಪ್ಪೆಂ. ನೀನೇಕೆ ಚಿಂತಿಸಿದಪೆ ? ಅಂತಪ್ಪ ಮೆಚ್ಚಿನ $ ಪಾರುಖಾಣಯಂಗಳಂ $ ವದಾನ್ಯಕುಲತಿಲಕಂ ನೀಂ ಎನಿತಿತ್ತೆಯೋ ? ದೈವವೊಸೆದೊಡೆ ಮುಂದೆ ಎನಿತೀವೆಯೋ ? ಎನಗಾಣತಿಯನೀಯು ; ಪೋತರ್ಪ್ಪೆಂ.

ಯುಧಿಷ್ಠಿರಂ-ಒಳ್ಳಿತು , ಅಂತುಗೆಯ್. ಒಂದು $ ಪಿಂಜರಿಯ ಕುರುದೊಡಮನಾದೊಡಂ $ ಈಯಲಿಲ್ಲದೆ ಪಿಂಜರಿವ ಎನ್ನ ಕೈ ದಕ್ಕಂಗೈಯಾಯ್ತು.

---

ಜಾಗವರಲ-ಮರಕತದ, ಸೀಸಕ-ಟೊಪ್ಪಿಗೆ (ಶೀರ್ಷಕ) ಮಿಸುನಿವೆಸದ-ಚಿನ್ನದ ಕೆಲಸದ, ಸವಗ-ಕವಚ, ಪಾರುಖಾಣಯ-ಔಚಿತ್ಯವರಿತು ಕುಡುವ ವಸ್ತು. ಪಿಂಜರಿ ಬಿಳ್ಳ, ಕುರುದೊಡಂ-ಸಣ್ಣಬಸವೆ, ದಕ್ಕಂಗೈ-ಮರದಕೈ.

ಕಾರುಣಿಕಂ-ಮಹಾರಾಜ ? ನಿನಗೆ ವಿಜಯಮಕ್ಕೆ (ಎಂದು ಪೋಪಂ)

ಧೌಮ್ಯಂ-ಮಹಾರಾಜನೆ ! ಆದುರ್ಯ್ಯೋಧನಂ ನಿನ್ನಂತೆ ಅರಸುಗೆಯ್ಯಲ್ ತೊಡಗಿದ ಮಾತ್ರದಿನೇಂ ? ನಡೆವಳಿಯೊಳನಿತೋ ಅಂತರಮುಂಟು. ಕಾಗೆ ಕೋಗಿಲೆಯಂತಿರ್ದೊಡೇಂ? ಸರದೊಳ್ ಭೇದವಿಲ್ಲಮೆ?

ದ್ರೌಪದಿ-ಆರ್ಯ್ಯಪುತ್ರ ! ಈ ದ್ರೌಪದಿ ಇನ್ನೆಗಂ ನಿನಗೆ ಪ್ರತಿಕೂಲೆಯಾಗಿ ಮೋಡಿಗೊಂಡಳಲ್ತು. ನಿನ್ನ ಪಾಳ್ಕೆಗೆ ಮನದೊಳಂ ಬೇಸತ್ತಳಲ್ತು. ನಾಣ್ಗೆಟ್ಟು ನುಡಿದಳಲ್ತು. ಮೀರಿ ಮಾತಾಡಿದಳಲ್ತು. ಇದು ನಿಮಗೆ ತಿಳಿಯದುದಲ್ತು. ಆದೊಡಂ ಇಂದು ನಿನ್ನಾಣತಿಯಾದೊಡೆ ಇನಿತು ಬಿನ್ನವಿಪೆಂ. ಪೆಣ್ಗೆ ನಾಲಗೆಯೆಂತುಟು ? ಸಿಗ್ಗಾಳಿಯೆನಿಸದೆ ಜರುಚುಗುಮೆನ್ನದಿರ. ಎನ್ನ ಮನದ ಬೇಗೆ ನಿನ್ನೊಳ್ ಅರಿಪದೊಡೆ ತೀರದು.

ಯುಧಿಷ್ಠಿರಂ-ದೇವಿ ! ಅಪ್ಪುದಪ್ಪುದು; ಬಲ್ಲೆಂ. ಪೆಣ್ಗಳ್ ತಮ್ಮ ಮನದ ಬೇಗೆಯಂ ಪೆರರೊಳ್ ಅರಿಪದೆ ಸಂತವಿರರ್.

ದ್ರೌಪದಿ-ಆರ್ಯ್ಯಪುತ್ರ ! ಪೆರರೊಳೆಂದೊಡೆ ಗೊಟ್ಟಿಯೊಳ್ ನೆರೆದ ನೆರೆವೊರೆಯ ಪೆಣ್ಗಳೊಳ್ ನಾಣಿಲ್ಲದೆ ತಮ್ಮ ಬೇಗೆಯಂ ಗಾಂಪೆಯರುಂತೆ ತಾನರಿಪುವುದರಿಸೇಂಗಡ ? ಆಕೆಯರೇಂ ಆರಿಪರೆ ? ತೀರಿಪರೆ ? ತನ್ನ ಕೈವಿಡಿದ ಮನದನ್ನನೊಳ್ ಅರಿಪುವೊಡೆ ಆತನೆಂತಾನುಂ ಸೈತಿಡುವಂ. ಅಂತು ನಿಮ್ಮೊಳಲ್ಲದೆ ಎನ್ನಳಲಂ ಇನ್ನಾರೊಳ್ ಆಂ ಅರಿಪವೇಳ್ಕುಂ.

ಯುಧಿಷ್ಠಿರಂ-ದೇವಿ ! ನಿನ್ನ ನುಡಿಯೊಪ್ಪಲ್ತಕ್ಕುದು. ಅದೇಂ ಪೇಳ್.

ದ್ರೌಪದಿ-ಆರ್ಯ್ಯಪುತ್ರ ! ಬರ್ಮೆ ಮುಗುದೆ ಆಂ ಅಳಲ್ವೇಗೆಯಿಂ ಮರುಳ್ದು ತಕ್ಕಳಿದು ಕೈಗಣ್ಮಿ ನುಡಿದೊಡಂ ಮನ್ನಿಸು.

ಯುಧಿಷ್ಠಿರಂ.-ಅದೇಂ ? ನುಡಿ.

ದ್ರೌಪದಿ-ಆರ್ಯಪುತ್ರ! ಇಂದು ಅಬೇಹುಕಾರಂ ಬಂದು ಬಿನ್ನವಿಸಿದ ಆಕೌರವಾಪಶದನ ಅಗ್ಗಳದ ರಾಜ್ಯವೈಭವಮಂ ಕಿವಿಯಾರೆ ನೀಂ ಕೇಳ್ದಿರ ಗಡ.

ಯುಧಿಷ್ಠಿರಂ-ಆಯ್ತು ಕೇಳ್ದವು.

ಭೀಮಂ-(ಆತ್ಮಗತಂ) ಕೇಳ್ದೊಡೇಂ ಕೇಳದೊಡೇಂ? ಕೇಳ್ದೊಡಂ ಕೇಳದಂತೆ ಗಡ.

ದ್ರೌಪದಿ-ಇದರಿಂ ನಿಮ್ಮ ಮನಕೆ ಇನಿತುಂ ಕುಂದುಕೊರತೆಯಾದುದಿಲ್ಲವೋ?

ಭೀಮಂ-(ಆತ್ಮಗತಂ) ಆರ್ಯಂ ಕುಂದುಕೊರತೆಯುಮಂ ಬಲ್ಲನೇ?

ದ್ರೌಪದಿ-ಮೋಣ್ ಉದಾರಹೃದಯರಾದ ನಿಮಗೆ ಅದೆಂತಕ್ಕುಂ? ಕರಂ ಕರುಂಬಾಳಯೆನಿಪ ಬೆಣ್ಗನಗೆ ಆಗದೆತೀರದು. ಅಪಗೆಯ ಪೇರೇಳ್ಗೆಯ ಬಾರ್ತೆಯೆಂಬ $ನರುನೆಯ್$ ಎನ್ನ ಕೊಡಂಕೆಯೆಂಬ ದರ್ವಿಯ ದ್ವಾರದಿಂ ಎನ್ನೆರ್ದೆಯೆಂಬ ಕೊಂಡದೊಳ್ ಬೀಳ್ವುದುಂ ಅಂದಿನಿಂ ಪೊಗೆಯುತಿರ್ದ್ದ ಅಳಲೆಂಬ ಅಗ್ಗಿ ಭಗ್ಗನೆ ಪೊತ್ತಿ ಪಜ್ಜಳಿಸುತಿರ್ಕ್ಕುಂ.

ಯುಧಿಷ್ಠಿರಂ-ದೇವಿ ಸಂತವಿರು ಸಂತವಿರು. ನಿನ್ನ ದುಃಖಾತುರಿಪದೆ ನಂದುಗುಂ.

ಭೀಮಂ-ಆರ್ಯನೆ? ದೇವಿಯ ದುಃಖಾಗ್ನಿ ಅದೆಂತು ಕೆಮ್ಮನೆ ನಂದುಗುಂ? ಅಪಗೆಯ $ವಿಶಸನವೆಂಬ$ ಪೂರ್ಣಾಹುತಿ ಆಗಲೆವೇಳ್ಕುಂ.

ದ್ರೌಪದಿ-ಆರ್ಯಪುತ್ರನೆ! ಆಲಿಸು.

---

ನರುನೆಯ್-ಸುವಾಸನೆಯುಳ್ಳ ತುಪ್ಪ; ವಿಶಸನ-ಸಂಹಾರ.

ಕಂ॥ ಪೇರಡವಿಯೊಳಾಂ ಬಗೆಯುಲ್ ।
ಬಾರದ ಕೋಟಲೆಗೆ ಸಿಲ್ಕಿ ತೊಳಲುತ್ತಿರೆಯುಂ ॥
ಕೌರವನನುತಪಿಸದೆ ತಾಂ ।
ಕ್ರೂರಂ ಪೆರಸಿರಿಯು ಪೆಂಪಿನಿಂ ಬೀಗಿದಪೂಂ ॥ ೧೩೭ ॥

ಎನ್ನ ನಿರ್ಭಾಗ್ಯತೆ ನೀಡುಂ ನೀಳವಾಗಿರೆ ಅವನಂ ಏಕೆ ಪಳಿವುದು ? (ಬಿಸುಸುಯ್ದು) ಹಾ ಆರ್ಯಪುತ್ರ ? ಏವೇಳ್ದಪೆಂ ?

ವೃ॥ ಮಣಿಯಾ ಮಂಚದ ಮಧ್ಯದೊಳ್ ಮಲಗುವಂ ಕಲ್ದಾಣ ದೊಳ್ ನಿದ್ರಿಪೈ । ಮಣಿಸಿಂಹಾಸನಮೇರುತಿರ್ದ್ದ ನಿನಗೀ ದರ್ಭಾಸನಂ ಕುಳ್ಳಿರಲ್ ॥ ಮಣಿಹಾರಾಳಿಯಿಂದಿಯ್ದು ರಾಜಸಭೆಯೊಳ್ ರಾರಾಜಿಸುತ್ತಿ ರ್ದ್ದ ನೀಂ । ತೃಣಗುಲ್ಮಂಗಳನಿಂತು ನಟ್ಟಡವಿಯೊಳ್ ಕಷ್ಟಂಬಡು ತ್ತಿರ್ದ್ದಪೈ ॥ ೧೩೮ ॥

ಕಂ॥ ಚಂದನದಿಂ ಘುಮಘುಮಿಸುವ ।
ಚಂದದ ನಳನಳಿಪ ನಿನ್ನ ಮೆಯ್ಯೊಳಗೆಲ್ಲಂ ॥
ಇಂದಿದೆಕೊಳ್ ಚೆಂದೂಳ್ಗಳ್ ।
ಸಂದಣಿಸಿರ್ದ್ದಪುವು ನೋಡಿ ಸೈಸುವುದೆಂತೋ ॥೧೩೯॥

ಕಡುಸೊಬಗಿಂ ಬರ್ದುಕುತಿರ್ದ್ದ ಸುಕುಮಾರರ್ ನಿನ್ನ ಸೋದರರ್ ಅಡವಿಯುಂ ಅಲೆಯಲ್ಕೆ ಬಂದರ್. ಇಂತಪ್ಪ ಅವತೆಗೀಡಾಗಿರ್ದ್ದೊಡಂ ನೀಂ ಆ ನೀಚಕೌರವರ್ಗೆ ಎಳ್ಳನಿತುಂ ಕನಲದಿರ್ಪೆ. ಜಗದೊಳ್ ನೀಚರಂ ನಿಗ್ರಹಿಪ್ಪುದೆ ರಾಜನ್ಯರ ಬಳಿಯುರನಲ್ತೆ. ನೀಂ ರಾಜನ್ಯ ರಾಜಹಂಸನೆಂದು ನೆಗಳ್ತೆವಡೆದಿರ್ದ್ದೊಡಂ ನಿನ್ನೊಳ್ ಕನಲ್ಕೆ ಅಣಮಿಲ್ಲ ವೇಕೆ ? ಆವರಾಜನ್ಯಂ ತಕ್ಕವಸರದೊಳ್ ಕನಲ್ಕೆಗೊಳ್ಳನೋ ಆತನಂ ಎಲ್ಲರುಂ ಪಂದೆಯೆನ್ನರೆ ? ಮಂದನೆನ್ನರೆ ? ಅಲಸನೆನ್ನರೆ ? ಅದು ಕಾರಣಂ ಪರಮದ್ರೋಹಿಗಳಪ್ಪ ಆಪಗೆವರ ವಿಷಯದೊಳ್ ತಾಳ್ಮೆಯು ನಿನಿತುಂ ತಾಳದೆ ಕನಲಲೆವೇಳ್ಕುಂ. ಇದು ತಾಳ್ಮೆಗೆ ಪೊಳ್ತಲ್ತು.

ಯುಧಿಷ್ಠಿರಂ.–(ಭೀಮಸೇನಂ ಕೈಯೊಳ್ ಪಿಡಿದು) ವತ್ಸಾ ! ಸಂತಮಿರ ಸಂತಮಿರ. ದೇವಿಯಂತೆ ನೀನುಂ ಚಾಳಿಲಿಯಾಗಿ ಮನಂಬಂದಂತೆ ಕೈಮಿಗೆ ಮಾಮಸಕಂಗೊಂಡು ಬಿರುನುಡಿಯುಂ ನುಡಿವುದೇ ? ನೀಂ ಕೇಳ್ದರಿಯಾ ? " ತಾಳ್ದಂ ಬಾಳ್ದಂ " ಎಂಬ ನಲ್ನುಡಿಯುಂ.

ಕಂ॥ ಬಡಲೆಂಬ ಪುತ್ತಿನೊಳಗೆಡೆ ।
ಮಿಡಿದಾನಾಲಗೆಯೆನಿಪ್ಪ ಪಾಮುರ್ಬ್ಬುತೆ ಕೂ ॥
ರ್ನ್ನಡಿಬಿಸಮಂ ಕಾರಲ್ ತಾಂ ।
ತೊಡಗಿರೆ ಶಮಮೆಂಬ ಗರುಡಮಣಿಯಿರವೇಡಾ? ॥೧೪೧॥

ಕಂ॥ ಆರಯ್ಯವೆನಿಪ್ಪರಿವೇ ।
ಆರಯ್ಯತಿಕೋಪಹಯಕೆ ವಾಗೆಯೆನಿಕ್ಕುಂ ॥
ಆರಯ್ಯದನುಳದೊಡೆ ಹಾ ।
ಆರಯ್ಯ ಬಳಿಕ್ಕೆ ಕಿಡದೆ ಸಂತಂ ಬಾಳ್ವರ್ ॥ ೧೪೨ ॥

ತಳತಳಪ ಜಸಜೊನ್ನದಿಂ ಜಗಮಂ ಬೆಳಗದೆ ಅರಂಗೆಟ್ಟು ನಡೆವರೇ ? ಆಂ ಪಿಗೊಂಡಂತೆ ಬನವಾಸಮಂ ಪೂರೈಸವೇಡವೇ ?

ಕಂ॥ ಅನುಜನೆ ನಗಳ್ದ* ಪಾಂಡುವ ।
ತನುಜರ್ ನುಡಿದಪ್ಪಿ ನಡೆದರೇ ಛೀ ಎನುತುಂ ॥
ಮನುಜರ್ ಕುಲಜರ್ ದಿವಿಜರ್ ।
ದನುಜರ್ ಜಗದಲ್ಲಿ ಜರಿಯದೇಂ ಮಾಣ್ದಪರೇ ॥ ೧೪೩ ॥

---

೧೪೧ ಇರವೇಡಾ– ಇರಬೇಕಲ್ಲವೆ ; ೧೪೨ ಆ + ರಯ್ಯವೆನಿಪ್ಪ + ಅರಿವೇ. ರಯ್ಯ–ರಮ್ಯ ; ಆರಯ್ಯತಿಕೋಪಹಯಕೆ–ಆ–ಎಲ್ಲಾ ಕಡೆಯಲ್ಲಿಯೂ ; ರಯಿ–ವೇಗವುಳ್ಳ ; ಅತಿಕೋಪಹಯಕೆ–ಮಹಾಕೋಪವೆಂಬ ಕುದುರೆಗೆ ; ವಾಗೆ–ಲಗಾಮು ; ಆರಯ್ + ಅದಂ , ಆರಯ್–ವಿಚಾರಮಾಡಿನೋಡು; ಆರ್ + ಅಯ್ಯ–ಯಾರ್; ಅಯ್ಯ ಎಂದು ಸಂಬೋಧನೆ. (ಇದು ನಾಲ್ಕು ಪಾದಗಳಲ್ಲಿಯೂ ತ್ರ್ಯಕ್ಷರಾತ್ಮಕವಾದ ಯಮಕ.)

ಅಂತು ಪಳಿಜಸಕೀಡಾಗಿ ಆವೆನಿತುಕಾಲಂ ಬದುರ್ಕವೇಳ್ಕುಂ? ನೆಲದೊಳ್ ಆಚಂದ್ರಾರ್ಕಮೇಸಿರ್ಪವೇ? ದೊರೆವಡೆದ ಮಾಂಧಾತ್ರಂ ಮುಂತಪ್ಪರುಂ ಕೆಲವುಂ ಕಾಲಮೆ ನೆಲದೊಳಿರ್ದ್ದರ್. ಅನ್ನರ್ $ ನನ್ನಿಗರ್ ಮಹಾರಾಜರ್ ದಿವಕೆಸಂದೊಡಂ ಯಶಃಕಾಯದಿಂ ಈಗಳುಂ ಜಗಮುಂ ಬೆಳಗಿದಪರ್. ಇಂತಿರಲೊಡಂ ಆ ಈಪ್ರೊಮರ್ಾರುದ್ಧದ ಬಡಲಂ ಪೊರೆಯಲ್ಕೆ ಪುಸಿಗರೆನಿಸಿಕೊಂಡು ಬದುರ್ಕುವುದು ತರನೇಂ? ಕನಲ್ಕೆವಿಡು, ಬಸ. ನಿನ್ನದಟಂ ಅರಿಯದರಾರೊ? ಮೊಸೆಯೊಳ್ ನೀಂ ಗದೆಯುಂ ಕೈಯಿಂ ಪಿಡಿದು ಅಲಯುಕಾಲದ ‡ಬಿಗುರ್ವರಿಜನಂತೆ‡ ಕಾಯ್ಪುಗೊಂಡು ಕಾಣಿಸಿಕೂಳ್ವುದುಂ ಮಾನಿಸರ ಮಾತೇಕ ನೆಗಳ್ದ ದೇವರ್ಕ್ಕಳುಂ ಪೂರಾಂತು ನಿಲಲಾರ್ತಪರೇ? ಇದಿರ್ಕೆ. ಆದೊಡಂ ಆಕೌರವರ್ಗ್ಗೆ ದಿವ್ಯಾಸ್ತ್ರಂಗಳಂ ಬಲ್ಲ ಬಿಲ್ಲೋಜರ್ ಗರುಡಿಯಾಚಾರ್ಯಂ ಮುಂತಪ್ಪರ್ ಪಲಂಬರ್ ನೆರವಾಗಿರ್ಪ್ಪರ್. ಅಲ್ಲದೆ ದುಜ್ಯೋಧನಂ ಅಳವಿಗಳದ ದಳಮುಂ ಅಳವಡಿಸಿರ್ಪ್ಪಂ. ಆವನೆರಮುಮಿಲ್ಲದೆನುಗೆ ಬವರ್ದಲೊಳ್ ಅವರೆಂತು ಗಡ ಜಯ್ಯರೆನಿಕುಂ?

ಭೀಮಂ.—ಎಮಗೆ ಎಮ್ಮ ಅದಟ ನರಂ.

ಧರ್ಮ್ಮಂ—ಕುಮಾರ ಭೀಮಸೇನ! ನಿನ್ನ ನುಡಿ ವೀರಂಗೆ ತಕ್ಕುದು. ಆದೊಡಂ ನೀಡುಂ ಬಗೆಯದೆ ಅದಾವ ಕಜ್ಜಕಂ ಊಜ್ಜುಗಿಸಲಾಗದು.

ಭೀಮಂ—ಬಿಡಿಂ. "ಅರಸನ ಕುದುರೆ ಲಾಯದಲ್ಲಿಯೆ ಮುಪ್ಪಾದಿತು" ಎಂಬಾತೆ ಎಮ್ಮ ಪೌರುಷಂ ಕಾಡಿನೊಳ್ ಜೀರ್ಣಿಸಿತು. ಅಂತುಮಿಂತು ಕುಂತಿಯ ಮಕ್ಕಳ್ಗೆ ರಾಜ್ಯಮಿಲ್ಲಂ.

ಧರ್ಮ್ಮಂ.—ಕುಮಾರ ಭೀಮಸೇನ! ಅದೇಕಿಂತುನುಡಿವೆ? ಆಕೌರವರ್ಗ್ಗೆ ಗರುಡಿಯ ಕಲ್ಲಾಯ್ತಂ ಮುಂತಪ್ಪರ್ ಕೆಲಂಬರ್ ನೆರವಾಗಿರ್ಪರೆಂದೊಡೆ ‡ ಏವಿರಿದು? ‡ ತಗೆ. ಪರಮಕಾರುಣಿಕರ್ ಮಹಾ

---

ನನ್ನಿಗರ್—ಸತ್ಯವಂತರು, ಬಿಗುರ್ವರಿಜು—ಭೈರವ, ಏವಿರಿದು—ಏನುಮೊಡ್ಡಮು,

ಯುಧಿಷ್ಠಿರಂ.-(ಭೀಮನಂ ಕೈಯೊಳ್ ಪಿಡಿದು) ವತ್ಸಾ ! ಸಂತಮಿರ ಸಂತಮಿರ. ದೇವಿಯಂತೆ ನೀನುಂ ಜಾಣಿಲಿಯಾಗಿ ಮನಂಬಂದಂತೆ ಕೈಮಿಗೆ ಮಾಮಸಕಂಗೊಂಡು ಬಿರುನುಡಿಯುಂ ನುಡಿವುದೇ ? ನೀಂ ಕೇಳ್ದರಿಯಾ ? "ತಾಳ್ವಂ ಬಾಳ್ವಂ" ಎಂಬ ನಲ್ನುಡಿಯುಂ.

ಕಂ ॥ ಒಡಲೆಂಬ ಪುತ್ತಿನೊಳಗೆಡೆ ।
ಪಿಡಿದಾನಾಲಗೆಯೆನಿಪ್ಪ ಪಾವುರ್ಬ್ಬುತೆ ಕೂ ॥
ರ್ನ್ನುಡಿಬಿಸವುಂ ಕಾರಲ್ ತಾಂ ।
ತೊಡಗಿರೆ ಶಮವೆಂಬ ಗರುಡಮಣಿಯಿರವೇಡಾ? ॥೧೪೧॥

ಕಂ ॥ ಆರಯ್ಯವೆನಿಪ್ಪರಿವೇ ।
ಆರಯ್ಯತಿಕೋಪಹಯಕೆ ವಾಗೆಯೆನಿಕ್ಕುಂ ॥
ಆರಯ್ಯದನುಳದೊಡೆ ಹಾ ।
ಆರಯ್ಯ ಬಳಿಕ್ಕೆ ಕಿಡದೆ ಸಂತಂ ಬಾಳ್ವರ್ ॥ ೧೪೨ ॥

ತಳತಳಪ ಜಸಜೊನ್ನದಿಂ ಜಗವುಂ ಬೆಳಗದೆ ಅರಂಗೆಟ್ಟು ನಡೆವರೇ ? ಆಂ ಪಿಗೊಂಡಂತೆ ಬನವಾಸವುಂ ಪೂರೈಸವೇಡವೇ ?

ಕಂ ॥ ಅನುಜನೆ ನಗಳ್ದ* ಪಾಂಡುವ ।
ತನುಜರ್ ನುಡಿದಪ್ಪಿ ನಡೆದರೇ ಛೀ ಎನುತುಂ ॥
ಮನುಜರ್ ಕುಲಜರ್ ದಿವಿಜರ್ ।
ದನುಜರ್ ಜಗದಲ್ಲಿ ಜರಿಯದೇಂ ಮಾಣ್ದಪರೇ ॥ ೧೪೩ ॥

---

೧೪೧ ಇರವೇಡಾ– ಇರಬೇಕಲ್ಲವೆ ; ೧೪೨ ಆ + ರಯ್ಯವೆನಿಪ್ಪ + ಅರಿವೇ. ರಯ್ಯ–ರಮ್ಯ ; ಆರಯ್ಯತಿಕೋಪಹಯಕೆ–ಆ–ಎಲ್ಲಾ ಕಡೆಯಲ್ಲಿಯೂ ; ರಯಿ–ವೇಗವುಳ್ಳ ; ಅತಿಕೋಪಹಯಕೆ–ಮಹಾಕೋಪವೆಂಬ ಕುದುರೆಗೆ ; ವಾಗೆ–ಲಗಾಮು ; ಆರಯ್ + ಅದಂ, ಆರಯ್–ವಿಚಾರಮಾಡಿನೋಡು; ಆರ್ + ಅಯ್ಯ–ಯಾರ್; ಅಯ್ಯ ಎಂದು ಸಂಬೋಧನೆ. (ಇದು ನಾಲ್ಕು ಪಾದಗಳಲ್ಲಿಯೂ ತ್ರ್ಯಕ್ಷರಾತ್ಮಕವಾದ ಯಮಕ.)

ಅಂತು ಪಳಿಜಸಕೀಡಾಗಿ ಆವೆನಿತುಕಾಲಂ ಬರ್ದುಕವೇಳ್ಕುಂ ? ನೆಲದೊಳ್ ಆಚಂದ್ರಾರ್ಕವೋಸಿರ್ಪ್ಪರೇ ? ದೊರೆವಡೆದ ಮಾಂಧಾತ್ರಂ ಮುಂತಪ್ಪರುಂ ಕೆಲವುಂ ಕಾಲಮ ನೆಲದೊಳಿರ್ದ್ದರ್. ಅನ್ನರ್ ‡ ನನ್ನಿಗರ್ ↑ ಮಹಾರಾಜರ್ ದಿವಕೆಸಂದೊಡಂ ಯಶಃಕಾಯದಿಂ ಈಗಳುಂ ಜಗಮುಂ ಬೆಳಗಿದಪರ್. ಇಂತಿರಲೊಡಂ ಆ ಈವೊರ್ಮಾರುದ್ದದ ಒಡಲಂ ಪೊರೆಯಲ್ಕೆ ಪುಸಿಗರೆನಿಸಿಕೊಂಡು ಬರ್ದುಕುವುದು ತರನೇಂ? ಕನಲ್ಕೆವಿಡು, ಬಸ. ನಿನ್ನದಟಂ ಅರಿಯದರಾರೊ ? ಮೊನೆಯೊಳ್ ನೀಂ ಗದೆಯುಂ ಕೈಯಿಂ ಪಿಡಿದು ಆಲಯಕಾಲದ ‡ ಬಿಗುರ್ವರಿಜನಂತೆ ‡ ಕಾಯ್ಪುಗೊಂಡು ಕಾಣಿಸಿಕೊಳ್ವುದುಂ ಮಾನಿಸರ ಮಾತೇಕ ನೆಗಳ್ದ ದೇವರ್ಕ್ಕಳುಂ ಮಾರಾಂತು ನಿಲಲಾರ್ಪರೇ ? ಇದಿರ್ಕೆ. ಆದೊಡಂ ಆ ಕೌರವರ್ಗೆ ದಿವ್ಯಾಸ್ತ್ರಂಗಳಂ ಬಲ್ಲ ಬಿಲ್ಲೋಜರ್ ಗರುಡಿಯಾಚಾರ್ಯಂ ಮುಂತಪ್ಪರ್ ಪಲಂಬರ್ ನೆರವಾಗಿರ್ಪ್ಪರ್. ಅಲ್ಲದೆ ದುರ್ಯೋಧನಂ ಅಳವಿಗಳಪ ದಳಮುಂ ಅಳವಡಿಸಿರ್ಪ್ಪಂ. ಆವನೆರವುಮಿಲ್ಲದೆಮಗೆ ಒರ್ಮೊದಲೊಳ್ ಅವರೆಂತು ಗಡ ಜಯ್ಯರೆನಿಕುಂ ?

ಭೀಮಂ.—ಎಮಗೆ ಎಮ್ಮ ಅದಟ ನರಂ.

ಧರ್ಮ್ಮಂ—ಕುಮಾರ ಭೀಮಸೇನ ! ನಿನ್ನ ನುಡಿ ವೀರಂಗೆ ತಕ್ಕುದು. ಆದೊಡಂ ನೀಡುಂ ಬಗೆಯದೆ ಅದಾವ ಕಜ್ಜಕಂ ಉಜ್ಜುಗಿಸಲಾಗದು.

ಭೀಮಂ—ಬಿಡಿಂ. “ ಅರಸನ ಕುದುರೆ ಲಾಯದಲ್ಲಿಯೆ ಮುಪ್ಪಾದಿತು ” ಎಂಬಾತೆ ಎಮ್ಮ ಪೌರುಷಂ ಕಾಡಿನೊಳ್ ಜೀರ್ಣಿಸಿತು. ಅಂತುಮಿಂತು ಕುಂತಿಯ ಮಕ್ಕಳ್ಗೆ ರಾಜ್ಯಮಿಲ್ಲಂ.

ಧರ್ಮ್ಮಂ.— ಕುಮಾರ ಭೀಮಸೇನ ! ಅದೇಕಿಂತುನುಡಿವೆ ? ಆ ಕೌರವರ್ಗೆ ಗರುಡಿಯ ಕಲ್ಲಾಯ್ತಂ ಮುಂತಪ್ಪರ್ ಕೆಲಂಬರ್ ನೆರವಾಗಿರ್ಪರೆಂದೊಡೆ ‡ ಪವಿರಿದು ? ‡ ತೆಗೆ. ಪರಮಕಾರುಣಿಕರ್ ಮಹಾ-

---

ನನ್ನಿಗರ್-ಸತ್ಯವಂತರು, ಬಿಗುರ್ವರಿಜು - ಭೈರವ, ಪವಿರಿದು - ಪಬುದೊಡ್ಡದು ;

ನುಭಾವರ್ ವ್ಯಾಸಮುನೀಂದ್ರರ್ ನಿಮಗೆ ಒಸೆದಪರ್. ಪರಮೇಶ್ವರಂ ನಿಮಗೆ ನೆರವಾಗಿರ್ಕ್ಕುಂ. ಅವರಿಂ ನಿಮಗೆ ಶುಭೋದರ್ಕಂ ಕರಗತಮಾಗಿರ್ಕ್ಕುಂ. ರಾಜ್ಯಶ್ರೀ ನಿಮ್ಮಂ ಸೇರಲ್ ಪಾರುತಿರ್ಕ್ಕುಂ.

ಯುಧಿಷ್ಠಿರಂ -ಪೂಜ್ಯರೆ ! ಈದೀನರನೆಮ್ಮಂ ಆಮಹನೀಯರ್ ಎಂತು ಗಡ ನೆನೆವರ್ ?

ಧೌಮ್ಯಂ -ಮಹಾರಾಜನೆ ! ಅಂತು ನೀಂ ಎನ್ನದಿರ. ಅನ್ನರ್ ಮಹನೀಯರ್ಗ್ಗೆ ದೀನರ್ ಶ್ರೀಮಂತರೆಂಬ ಎಣಿಕೆಯುಂಟೆ ? ಆಲಿಸು.

ಕಂ ॥ ಜ್ಞಾನಿಗಳನುಗ್ರಹಿಪ್ಪರ್ ।
ದೀನರನತಿಶಯದಿನೊಲ್ದು ಸಿರಿಯುಳ್ಳವರಿಂ ॥
ಭಾನುವ *ಕದಿರ್ಗಳ್ ನೋಳ್ಪೊಡೆ ।
ಪೀನಂ ಬೆಳಗಿದಪುವಲ್ತೆ ಬಯಲಂ ಬೀಡಿಂ ॥ ೧೪೪ ॥

ಯುಧಿಷ್ಠಿರಂ.-(ತಿರುಗಿನೋಡಿ) ಪೂಜ್ಯರೆ ! ಇತ್ತನೋಳ್ಪುದು. ಪರಿಜುವಡೆದ ಅದೊಂದು ದೇದೀಪ್ಯಮಾನಮಪ್ಪ ತೇಜಂ ಬಳಸಾರ್ಗ್ಗುಂ.

ಧೌಮ್ಯಂ.-(ನೋಡಿ) ಆದಾರಿವರ್ ನೇಸರೇಂ ಬಳಸಂದಪನೋ ? (ಪರಿಕಿಸಿ) ಮಹಾರಾಜನೆ ! ಅಲ್ತಲ್ತು. ಬಗೆದೆಂ -ಪೂಜ್ಯರ್ ವೇದವ್ಯಾಸ ಮಹರ್ಷಿಗಳ್.

ಯುಧಿಷ್ಠಿರಂ -ಅರರೆ ! ಏಳ್ವುದೇಳ್ವುದು. " ನೆನೆದರ್ಗ್ಗಮನದಲ್ಲಿಯೆ " ಎಂಬುದು ದಿಟಂ. (ಎಲ್ಲರುಂ ಏಳ್ವರ್).

(ಬಳಿಕೆ ವ್ಯಾಸಮುನೀಂದ್ರಂ ಪುಗುವಂ)

ಧೌಮ್ಯಂ-ಪೂಜ್ಯರ್ಗ್ಗೆ ಧೌಮ್ಯಂ ತುಳಿಲ್ಗೆಯ್ವಂ (ಎಂದಂತು ಮಾಳ್ಪಂ)

ವ್ಯಾಸಮುನೀಂದ್ರಂ- ಮೌನಿವರ ! ನಿನ್ನ ತಪಂ ಏಳ್ಗೆಯೊಂದು ತಿರ್ದ್ದಪುದೆ ?

ಧೌಮ್ಯಂ- ಮಹನೀಯರ ಚರಣಾನುಗ್ರಹದಿಂ.

---

೧೪೪ ಪೀನಂ-ಅಧಿಕವಾಗಿ, ಬೀಡಿಂ-ಮನೆಗಿಂತಲೂ.

ಯುಧಿಷ್ಠಿರಾದಿಗಳ್- (ವಂದಿಪರ್)

ವ್ಯಾಸಮುನೀಂದ್ರಂ- ವತ್ಸರಿರ ! ಜೈವಾತೃಕರೆನಿಸಿ ಬರ್ದುಕಿಂ.

ದ್ರೌಪದಿ-ದೀನೆ ದ್ರೌಪದಿ ಪೂಜ್ಯರ್ಗೆ ಕುಂಬಿಡುವಳ್ (ಎಂದಂತು ಮಾಳ್ಪಳ್)

ವ್ಯಾಸಂ- ವತ್ಸೆ ! ಮುತ್ತೈದೆಯೆನಿಸ. ನಿನ್ನದೈನ್ಯವಿಂತೆ ಇರದು; ನಿನ್ನ ಮನೋರಥದುಂ ಪೂರ್ಣಂ. ಚಿಂತಿಸದಿರ.

ಯುಧಿಷ್ಠಿರಂ- ಪೂಜ್ಯರೆ ! ಈ ದರ್ಭಾಸನವನೆ *ರನ್ನವಿತ್ತರಿಗೆ ಗೆತ್ತು* ಅಳಂಕರಿಸವೇಳ್ಕುಂ.

ವ್ಯಾಸಂ-ಈ ದರ್ಭಾಸನವೆ ನಿನಗೆ ಸುಸ್ಥಿರವಾಗಿರದು. ಎಲೆ ಅರಸರ ಬಿತ್ತಗನ ! ನಲ್ಲರದ ಬಿತ್ತನಿಪ ನೀಂ ಅನ್ನುಂ ಲೋಕೋತ್ತರ ಕೀರ್ತಿಯನೆತ್ತಲುಂ ಬಿತ್ತರಿಸುತೆ ಉತ್ತಮವಾದ ನಿನ್ನ ಬಿತ್ತರದ ಆ ಬಿತ್ತರಿಗೆಯುಂ ಮತ್ತೆಯುಡರ್ದಪೆ. ಚಿತ್ತದೊಳ್ ಚಿಂತಿಸದಿರು.

ಯುಧಿಷ್ಠಿರಂ- ಪೂಜ್ಯರೆ ! ನಿಮ್ಮಡಿಗಳಾಣೆ ಆನದರ್ಕೆ ಚಿಂತಿಸೆಂ. ಆದೊಡೆ ಎನ್ನ ಸತ್ಯಂ ಜಗುಳದಂತೆ ನೀಂ ಅನುಗ್ರಹಿಸವೇಳ್ಕುಂ. ಇದನೊಂದಂ ಆಂ ನಿಮ್ಮಂ ಸೆರಂಗೊಡ್ಡಿ ಬೇಡಿದಪೆಂ.

ವ್ಯಾಸಂ- ವತ್ಸಾ ! ನಿನ್ನ ಸತ್ಯಕೆ ತಡೆಯೇಂ ?

ಕಂ|| ಬಿದು ಬಿಸುಪಡರ್ವ*ಂದುರೆ ಬೆಂ |
ಗದಿರಂ ಕುಳಿರ್ವ*ಂದು ಗಾಳಿ ಗಳ್ಕನೆ ಬೆಮರ್ವ*ಂ ||
ದುದಧಿಗೆ ನೀರಳ್ಕೆ ಸಮಂ |
ತೊದವುಗುಮೆಂದಂದು ನಿನತು ಸತ್ಯಂ ಜಗುಳ್ಗುಂ* || ೧೪೫ ||

ಕುಳ್ಳಿರಿಂ (ಎಂದೆಲ್ಲರೊಡನೆ ಕುಳ್ಳಂ)

---

ರನ್ನವಿತ್ತರಿಗೆಗೆತ್ತು-ರತ್ನಸಿಂಹಾಸನವೆಂದು ತಿಳಿದು.

ಯುಧಿಷ್ಠಿರಂ- ಪೂಜ್ಯರೆ ! ದೀನರ್ ಆಂ ಈ ಕಾಡಿಂಗಾದೊಡಂ ಇವರೆಮ್ಮವರೆಂದು ವಾತ್ಸಲ್ಯಂಗೊಂಡು ಇತ್ತಲೆಯ್ದಿ ಎಮಗೆಲ್ಲಂ ಚರಣದರ್ಶನವಿತ್ತುದರಿಂ ಆಂ ಧನ್ಯರೆನಿಸಿದೆವು.

ವ್ಯಾಸಂ- ವತ್ಸಾ ! ನೀನಿಂತು ಉಪಚರಿಪುದೇಕೆ ? ಧರ್ಮಾತ್ಮರ್ ನೀಂ ಕಾಡಿನೊಳಿರ್ದೊಡಂ ಎಂತಪ್ಪ ಅವಸ್ಥೆಯೊಳಿರ್ದೊಡಂ ನಿಮ್ಮಂ ನೋಡದಿರಲೊಲ್ಲೆಂ. ದುರುಳರ್ ಆ ಕೌರವರ್ ನಾಡೊಳಿರ್ದೊಡಂ ಪಟ್ಟವಣೆಯುಂ ಏರಿ ಮೆರೆಯುತಿರ್ದೊಡಂ ಅವರಲ್ಲಿಗೆಯ್ದಲೊಲ್ಲೆಂ. ಆದುರ್ಯೋಧನಂ ರಾಜ್ಯಭಾರಮುಂ ವಹಿಸಿ ಮೆರೆಯುತಿರ್ದ ಮಾತ್ರದೊಳೇಂ ? ಕಳ್ತೆ ಕತ್ತುರಿಯುಂ ಪೊತ್ತಂತೆ ಗಡ.

ಧೌಮ್ಯಂ-ಮಹಾರಾಜನ ! ಪೂಜ್ಯರ ನುಡಿ ತಗುಗುಂ. ನೈಸ್ಪೃಹ್ಯದಿಂ ಜಗಮುಂ ತೃಣಕ್ಕೆ ಬಗೆದ ಸಿದ್ಧಸಂಕಲ್ಪರ್ ಮಹನೀಯರ್ಗೆ ಜಗದೊಳ್ ಬೇಳ್ಪುದೇನಿರ್ಕ್ಕುಂ ? ಆದೊಡೆ ನಿಮ್ಮ ಸೌಜನ್ಯಸಂಪದಕ್ಕೆ ಒಸೆದು ನಿಮಗೆ ಅದೊಂದು ಮೇಲಂ ಅನುಗೊಳಿಸಲ್ ಬಳಿಗೆ ಎಯ್ದಿರ್ಪರ್.

ಯುಧಿಷ್ಠಿರಂ-ಪೂಜ್ಯರೆ ! ನಿಮ್ಮ ಅನುಗ್ರಹವಿಶೇಷದಿಂ ಆವದೇಂ ಧನ್ಯರೋ ? ಆಕಸ್ಮಿಕವಪ್ಪ ನಿಮ್ಮ ಬರವಿದು ಎಮಗದೊಂದಂ "ಉದರ್ಕ"ಮುಂ ಒಡರಿಸದೆ ಇರದು. ಏಕೆನೆ —

ವೃ॥ ಚಣದೊಳ್ ಮೂದುರಿತಂಗಳಂ ಕಿಡಿಸುಗುಂ ಮೋಕ್ಷಬುದ್ಧಿಯುಂ
ತೀವಿ ಬಾ । ಸಣಿಸಿಪ್ಪರ್ಜಡಭಾವಮಂ ಕಳೆಯುತುಂ ಸುಜ್ಞಾ
ನಮುಂ ಬೆಚ್ಚರ್ಕುಂ ॥ ಅಣಿಮಾದ್ಯುತ್ತಮಸಂಪದಂಗಳನಳುಂ
ಬಂ ಸಾರ್ಚುಗುಂ ನೋಡೆ ಧಾ । ರಿಣಿಗೇನೇಂ ಶುಭರಾಜಿಯುಂ
ನೆಗಳದೋ ಸಂದರ್ಶನಂ ಸಂತರಾ ॥ ೧೪೬ ॥

ಆದೊಡಂ ತಮ್ಮ ಬರವಿಂಗೆ ದೂಸರದೇನೆಂದು ತಿಳಿಯಲ್ ಚಪಲಮೀಬಗೆ ತವಕಂಬಡುಗುಂ.

---

ಉದರ್ಕ-ಮುಂದಣಭ್ಯುದಯ.

ವ್ಯಾಸಂ- ವತ್ಸ! ಆಲಿಸು. ಈಗಳ್ ಬಲ್ಬಿಲ್ಲಾಗರರಾದ ದ್ರೋಣಾದಿಗಳ ನೆರವುಂ ಕೈಕೊಂಡು ಬೇರ್ವಿಟ್ಟು ಸೊರ್ಕಿನೊರೆವ ದುರ್ಯೋಧನನತ್ತಣಿಂ ನೀಂ ಪತ್ತೆ ಬೆಚ್ಚಬಿಸುಗೆಯ ರಾಜ್ಯಮಂ ಸಡಿಲ್ಚುವೊಡೆ ನೀವುಂ ಬಗೆವಗೆಯುಸ್ತ್ರಂಗಳ ಬಲಮಂ ಪಡೆಯಲೆವೇಳ್ಕುಂ. ಆನಿದನರಿತು ನಿಮಗೆ ದಿವ್ಯಾಸ್ತ್ರಲಾಭಮಪ್ಪಂತು ಅನುಗ್ರಹಿಸಲ್ಬಂದೆಂ.

ಯುಧಿಷ್ಠಿರಂ- ಆಂ ಇಂದು ನಿಮ್ಮ ಅನುಗ್ರಹದಿಂ ಕೃತಾರ್ಥರಾದೆವು. ಇದೀಗಳ್ ಸತ್ತಿಗೆಯಿಲ್ಲದಂಗೆ ಕಲ್ಪತರುವೆ ನಳಲನಿತ್ತಂತಾಯ್ತು. ಬೆಳ್ಳಕ್ಕರಿಗಂಗೆ ಸರಸತಿಯೆ ಬಳಿಸಾರ್ದು ಬಿಜ್ಜೆಯಂ ಉಪದೇಶಿಸಿದಂತಾಯಿತು. ಬರುಪಂ ಪುಗಾಣದೆ ಬಸವಳಿದಿರೆ ಭಾಗ್ಯಲಕ್ಷ್ಮಿ ಭೋರನಿದಿರ್ವಂದು ಪದುಳವಂ ಬೆಸಗೊಂಡಂತಾಯಿತ್ತು. ಬಾಯಾರಿದಂಗೆ ಪಾಲ್ಗಡಲೆ ಕಟ್ಟಿದಿರೊಳ್ ಪೊನಲಿಡುವಂತಾದತ್ತು.

ವ್ಯಾಸಂ–ಆಯುಷ್ಮಂತನೆ! ಇತ್ತಲೆಯಾರ್ತ್ರ(ಎಂದವತಿದೂರಂಸಾರ್ದು) ಇದೆಕೊಳ್ ಆಂ ಉಸಿರ್ವ ಮಂತ್ರಮಂ ಅರ್ತಿಯಿಂ ಆಲಿಸು (ಎಂದು ಕಿವಿಯೊಳ್ ಪೇಳ್ದು) ಈ ಮಂತ್ರಮಂ ಸಾಧಾರಣವೆಂದು ಬಗೆಯದಿರು.

ಸ್ರ॥ ಇದು ನಿಚ್ಚಂ ದೃಢಭಕ್ತಿಯಿಂ ಜಪಿಸುವಗ್ಗರ್ಕ್ಕುಂ ಬಸಂ
ಮಾನಸ । ಕ್ರೋಧವಿಕ್ಕುಂ ಪರಮಪ್ರಮೋದಭರಮಂ ಮಾಪಾ
ಪಮಂ ಬಂಜಿಕುಂ ॥ ವಿದಳಿಕ್ಕುಂ ನೆಲೆಗೊಂಡ ಪೇರೆಡರ್ಗಳಂ*
ಸರ್ವೋತ್ತಮಂ ಕೇಳ ಬೇ । ಗದಿನೋರಂತೆ ಹಸಾದಮಂ
ದೊರೆಯಿಕುಂ ಶ್ರೀಪಾರ್ವತೀಕಾಂತನಾ ॥ ೧೪೨ ॥

ಈ ಮಂತ್ರಮಂ ಮನದೆಕೊಂಡು ಇಂದ್ರಕೀಲಾಚಲಮನೆಡೆಗೊಂಡು *ಬಾಂಬೊಚ್ಚದಲೆಯನಂ* ಜಾನದೆ ಕಂಡು ಬಕುತಿಕೈಪಿಗೆ ತಪವಿರ್ಕೆ. ಆ ಮಾದೇವಂ ಉಸೆದು ಪಾಶುಪತವೆಂಬ ತನತು ದಿವ್ಯಾಸ್ತ್ರಮಂ ಅನುಗ್ರಹಿಪಂ. ಮೇಣ್ ಆತನ ಕೃಪೆಯಿಂದಮೆ

ಬಾಂಬೊಚ್ಚದಲೆಯನಂ-ಈಶ್ವರನನ್ನು; (ಗಂಗೆಯೇ ತಲೆಯಲ್ಲುಳ್ಳವನು).

ಇಂದ್ರಾದಿಗಳೆಣ್ಬರ್ ದೆಸೆವಳರುಂ ಬಗೆವಗೆಯಸ್ತ್ರಂಗಳಂ ನೀಡಿದಪರ್. ಅರ್ಜುನಂ ಅಸ್ತ್ರಂಗಳನಲ್ಲದೆ ಬೇರೆವಯಕೆಗಳಂ ಬಯಸದಿರ್ಕ್ಕೆ. ನೀಂ ಈ ಮಂತ್ರಮಂ ಇನ್ನಾರ್ಗ್ಗಂ ಅರಿಪಲಾಗದು. ಇದರಿಂ ಕುಮಾರನರ್ಜುನಂ ಅನರ್ಗಳಂ ಅಗ್ಗಳದ ನುತಿಗೆ ಬರ್ಪ್ಪಂ. ನಿಮಗೆ ಸ್ವಸ್ತಿಯಕ್ಕೆ. ಆಂ ಪೋಗಿ ಬರ್ಪ್ಪೆಂ. (ಎಂದಲ್ಲಿಯೆ ಮಾಯ್ಗರೆದಪಂ)

ಯುಧಿಷ್ಠಿರಂ— ವತ್ಸ ಅರ್ಜುನ! ಇತ್ತಬಾರ.

ಅರ್ಜುನಂ- (ಬಳಿಸಾರ್ಗ್ಗಂ)

ಯುಧಿಷ್ಠಿರಂ- (ಕೊಡಂಕೆಯೊಳ್ ಮಂತ್ರಮಂ ಪೇಳ್ದು) (ಪ್ರಕಾಶಂ) ಈ ಪರಮಮಂತ್ರಮಂ ಇಂದು ಪೂಜ್ಯರ್ ನಿನಗೆ ಉಪದೇಶಿಸೆಂದು ಎನಗೆ ಬೆಸಸಿದರ್. ನೀಂ ಐಕಿಲ್ವೆಟ್ಟಿನ ತಪ್ಪಲೊಳ್ ಕಣ್ಗೊಳ್ವ ಇಂದ್ರಕೀಲಾಚಲಮಂ ಪೊಕ್ಕು ಅತ್ತಲ್ ದೇವದೇವನಾ ಮಹಾದೇವನಂ ಈ ಮಂತ್ರದಿಂ ನೀಡುಂ ಭಜಿಸಿ ಹರಿಸಂಬಡಿಸು. ನಿಚ್ಚಮುಂ ಬ್ರಾಹ್ಮಮುಹೂರ್ತದೊಳ್ ಎಳ್ದು ಚಿತ್ತಶುದ್ಧಿಯುಂ ತಾಳ್ದು ಪುಣ್ಯನದಿಯೊಳಳ್ದು ಸಂಧ್ಯೋಪಾಸನಾದಿಗಳಂ ನೆಗಳ್ದು ನೀಡುಂ ನಿಷ್ಟೆಯೊಳ್ ಇರ್ದ್ದು ಪರಮೇಶ್ವರನ ಅಡಿದಾವರೆಯಂ ಜಾನಿಸು. ಚಿತ್ತಶುದ್ಧಿಯಿಲ್ಲದೆ ಆವುದುಂ ಸಿದ್ಧಿಸದು ಕೇಳ್ —

ವೃ॥ ತೊರೆಯೊಳ್ ಸುಮ್ಮನೆ ಮಿಂದೊಡೇನದರೊಳೆಂದುಂ ಮೀಂಗ
ಳುಂ ಮೀಗುಗುಂ। ಬರುಜಾನಂಬಡೆದಿರ್ದ್ದೊಡೇನೊ ಬಕನುಂ
ಮೀಂ ಬರ್ಪುದಂ ಜಾನಿಕುಂ ॥ ಮೆರೆದೇಂ ಕೆಮ್ಮನೆ ಕಾಡಿನಲ್ಲಿ
ಮೆರೆಯುತ್ತಿರ್ಕ್ಕುಂ ಮಿಗಂಗಳ್ ಸಮಂ। ತರಿತಾರಯ್ವೊಡೆ
ಚಿತ್ತಶುದ್ಧಿರಹಿತಂಗೆಲ್ಲಂ ನಿರರ್ಥಂಗಡಾ ॥ ೧೪೮ ॥

ತಪವಿರ್ಪನಿನ್ನೆಡೆಗೆ ಬೆಡಂಗಿನಬಿಂಕದದೊಂದುಬಾವದ ಅಚ್ಚರಸೆಯರ್ ಬಂದು ನಲ್ದುನರ್ತಿಸುತೆ ತಪಕೆ ಎಡರನೊಡರಿಸಲ್ ತೊಡಗುವರ್. ಆಕೆಗಳ ನಳನಳಿಪ ಮೆಯ್ಯ ರೂಪಲಾವಣ್ಯಕೆ ಬೆಲ್ಲುಂಬೆರಗಾಗಿ ಮಾರುವೋಗಿ ಮನಮಂ ಸಡಿಲ್ವಿಡವೇಡ. ಪಿಸುಣರೊಡನೆ ಮಾತಾಡ

---

೧೪೮ ಬರುಜಾನಂ-ಬರಿದಾದಧ್ಯಾನ.

ಲ್ವೇಡ. ಆರನುಂ ಬರಿದೆ ಪೊಗಳ್ದೊಡೆ ಬೀಗಿ ಬಿಗ್ಗನೆ ಬೀಳಬೇಡ. ಅಂತಲ್ಲದೆಯುಂ.

ವೃ|| ತೊದಳ್ವಾತಿಂಗೆಡೆಯೀಯವೇಡ ಮುಳಿಸಿಂಗೀಡಾಗಬೇಡುರ್ಕ್ಕಿ
ಮಾ | ಪದದಿಂ ಬೀಗಿರಬೇಡ ಮೋಹಪಥದೊಳ್ ಕಾಲೂರ
ಬೇಡಂತು ಬಿಂ || ಕದೆ ಜಾನಂದೊರೆದೇಳಬೇಡ ಪೆರರಂ ನೀನೇ
ಳಿಸಲ್ವೇಡ ಚಿ | ತ್ತದೆ ವೈಕಲ್ಯಮನಾನಬೇಡ ಪೆರತೇಂ ಮಾದೇ
ವನೊಲ್ವಂತಿರ್ಕೆ || ೧೪೯ ||

ನಡೆ ತಳ್ವದೆ. ಮಹೇಶನ ಚರಣಾನುಗ್ರಹದಿಂ ಮಹೇಂದ್ರಾದಿಗಳೆಣ್ಬರ್ ದೆಸೆವಳರ್ ನಿನಗೆ ಬಗೆವಗೆಯ ಮಹಾಸ್ತ್ರಂಗಳಂ ಕರುಣಿಕೆ. ಕಾಲತ್ರಯಮುಂ ವೇದಚತುಷ್ಟಯಮುಂ ಭೂತಪಂಚಕಮುಂ ಹರಿಶ್ಚಂದ್ರಾದಿಗಳ್ ಚಕ್ರವರ್ತಿಗಳರುವರುಂ ಕಶ್ಯಪಾದಿಗಳ್ ರಿಸಿಗಳೇಳ್ವರುಂ ಬ್ರಾಹ್ಮ್ಯಾದಿಮಾತೃಕೆಗಳ್ ಏಳ್ವರುಂ ವಸುಗಳೆಣ್ಬರುಂ ಮರೀಚ್ಯಾದಿಗಳ್ ಬೊಮ್ಮರೊಂಬದಿಂಬರುಂ ಸೂರ್ಯಾದಿಗಳ್ ತೊಂಬರುಂ ಪದಿಂಬರ್ ದೆಸೆವೆಣ್ಗಳುಂ ರುದ್ರರ್ ಪನ್ನೊರ್ವರುಂ ಪನ್ನಿರ್ವರಾದಿತ್ಯರುಂ ಪದಿನಾಲ್ವರ್ ಮನುಗಳುಂ ನಾಲ್ವತ್ತೊಂಬಯ್ವರ್ ಮರುತ್ತುಗಳುಂ ನಿನಗೆ ಭದ್ರಂಗಳಂ ಗೆಯ್ಗೆ. ನೀಂ ಅಸ್ತ್ರಂಗಳನಲ್ಲದೆ ಪೆರತೊಂದಂ ಬಯಸದಿರ್.

ಅರ್ಜುನಂ.--ಆರ್ಯನೆ ! ಆಣತಿಯಾದಂತು ನಡೆವೆಂ. ಈ ವಿಷಯದೊಳ್ ನೀನಿನಿತುಂ ಶಂಕಿಸಬೇಡ. ಇಂದೆನ್ನ ಪುಟ್ಟು ಸಫಲವಾಯ್ತು. (ಎಂದು ಧೌಮ್ಯಯುಧಿಷ್ಠಿರಭೀಮರ್ಗೆರಗಿ ನಕುಲಸಹದೇವರಂ ತಳ್ಕೈಸಿ) (ದ್ರೌಪದಿಯುಂ ನೋಡಿ) ಎಲೆ ದೇವಿ ! ನಿನ್ನ ಬಾಗುಳೆಂಬ ಕಾಳ್ಕಿಚ್ಚು ಮಾದೇವನ ಪಸಾದವೆಂಬ ತನಿವಳೆಯಿಂ ನಂದುವ ನಲ್ವೊಳ್ತು ಬದವಿರ್ಕ್ಕುಂ. ಅದರಿಂ ನೀಂ ಇಂ ಚಿಂತಿಸದಿರ.

ದ್ರೌಪದಿ-ಆರ್ಯಪುತ್ರ! ಮಹಾಪುರುಸರ ಕೈವಿಡಿದೆನಗೆ ಚಿಂತೆಯೇಂ? ಆದೊಡಂ ಪೆಣ್ಗಳ್ಗೆ ಸಹಜವಪ್ಪ ಚಾಪಲದಿಂ ಬರಿದೆ ಮಲಮಲನೆ ಮರು

ಗುವೆಂ. ಆದೊಡೆ ಆಪರಮದ್ರೋಹಿಗಳ ಬಿಂಕಮುಂ ಎಮಗೊದ ವಿರ್ಪ ಆತಂಕಮುಂ ನಿಮ್ಮ ಉದಾರಹೃದಯದೊಳ್ ನಾಂಟಿದೊಡೆ ಸಾಲ್ಗುಂ.

ಅರ್ಜುನಂ.-ದೇವಿ! ಇನ್ನುಂ ಆ ವಿಷಯದೊಳ್ ವಿಚಾರವೇಂ?

ಕಂ॥ ತಪವಂ ನೆಗಳ್ದು ಮಹೇಶನ।
ಕೃಪೆಯಿಂ ಕೈಕೊಂಡು ದಿವ್ಯವನಿಪಸ್ತ್ರಮನಾಂ॥
ರಿಪುನಿಕರದ ಮದಮನಡಂ।
ಗಿಪೆನೆಲೆಮುದಿರಾಕ್ಷಿ! ಮನದೆ ಮರುಗದಿರೆಂದುಂ॥೧೫೦॥

ಆಂ ಪೋಗಿಬರ್ಪೆಂ ಎನ್ನ ಬೀಳ್ಕುಡ.

ದ್ರೌಪದಿ.-ಆರ್ಯಪುತ್ರನ! ಈ ಕಾಡಿನೊಳ್ ಕೋಟಲೆಗೊಂಡಾದೊಡಂ ಬರ್ದುಂಕುವೆನಲ್ಲ ನಲ್ಲ! ನಿಮ್ಮೊಳೊರ್ವರುಮಂ ಅಗಲ್ದು ನಾನರೆನಿಮಿಸಂ ಬರ್ದುಕಬಲ್ಲೆನೇ!

ಅರ್ಜುನಂ.-ದೇವಿ! ಮನಮಂ ಬಿಗಿಪಿಡಿ. ಈ ವೇಳೆಯೊಳ್ ನೀಂ ತುಂಬಿತುಳುಂಕುವ ಕಣ್ಬನಿಗಳಂ ಸೂಸುತೆ ಶೋಕಿಪುದೇ! (ಎಂದು ದ್ರೌಪದಿಯ ಕಣ್ಣೀರಂ ಮಿಡಿದು ಕೈಸೆರಗಿನಿಂದೊರಸುವಂ).

ದ್ರೌಪದಿ-ಆರ್ಯಪುತ್ರ! ಈಮಂಗಳಕಾಲದೊಳ್ ಆಂ ಶೋಕಿಸೆಂ. ನಿನಗೆ ಮಂಗಳಮಕ್ಕೆ. ಬೆನಕಂಗೆ ಕೈಮುಗಿದು ವಾಗ್ದೇವಿಗೆ ಪೊಡಮಟ್ಟು ಮಾದೇವಿಗೆ ಕುಂಬಿಟ್ಟು ಶ್ರೀದೇವಿಗೆರಗಿ ಭೂದೇವಿಗೆ ಬಲವಂದು ಆಕೆಯರ ನಲ್ಲರ್ಗೆ ನತಿಯೊಡರ್ಚ್ಚಿ ಶಚೀದೇವಿಗೆ ಮಣಿದು ಸಂಧ್ಯಾದೇವಿಗೆ ವಂದನವೆಸಗಿ ಅರುಂಧತಿ ಮುಂತಪ್ಪ ಮಾರಿಸಿವಡದಯರ್ಗೆ ತುಳ್ಕಿಲ್ಗಿಯ್ದು ಸಪ್ತಮಾತೃಕೆಗಳ್ಗೆ ಮೆಯ್ಯಿಕ್ಕಿ ಸೂರ್ಯಾಚಂದ್ರಮರ್ಗೆ ತಲೆವಾಗಿ ದೆಸೆವಳರ್ಗೆ ಪ್ರಣಾಮಂಗೆಯ್ದು ಅತ್ತೆವಿರ ಅಡಿಗೆ ಮೊಳ್ಗಿ ಶ್ರೀಕೃಷ್ಣನ ಕಾಲ್ವಿಡಿದು ಬಕುತಿಯಿಂ ಬೇಡಿ ನಿನಗೆ ಸನ್ಮಂಗಳಮಂ ಬಯಸುವೆಂ. ನಿನಗೆ ಪರಶಿವಂ ಕರವೊಸಗೆ.

ಭೀಮಂ.—ವತ್ಸ ! ಪರಮೇಶ್ವರನ ಪ್ರಸಾದಮಂ ಪಡೆದು ಕೃತಾರ್ಥನಾಗಿ ಮರಲ್ವ ನಿನ್ನಂ ಅದೆಂದಿಂಗೆ ನೋಳ್ಪೆವೋ.

ಅರ್ಜುನಂ.—ಆರ್ಯನೆ ! ಸಾಭ್ರಾತ್ರವೆಂಬುದಿಂತುಗಡ.

ಧೌಮ್ಯಂ.—ಕುಮಾರ ಅರ್ಜುನ ! $ ಕರವಾಳ್ವಿಲ್ಗಣೆಗಳಿಂ $ ಅಲಂಕೃತನಾಗಿಯೆ ನೀಂ ಪೊರಮಡು.

ಅರ್ಜುನಂ.—ಆಣತಿ. (ಎಂದು ಕರವಾಳ್ವಿಲ್ಗಣೆಗಳಂ ಧರಿಪಂ).

ಯುಧಿಷ್ಠಿರಂ.—ವತ್ಸಾ ! ಇಂ ಪೊರಮಡು. ನಿನಗೆ ದಾರಿ ಸುಗಮಮಕ್ಕೆ.

ಕಂ॥ ಆವನ ಕರುಣಾಲೇಶದೆ ।
ಪಾವನತರಮಪ್ಪ ಜಾಣ್ಮೆ ದೊರೆಕೊಳ್ವುದೊ ಲೋ ॥
ಕಾವನತತ್ಪರನೆನಿಸುವ ।
ದೇವನನಂ ಪೊರೆಗೆ ಸಚ್ಚಿದಾನಂದಮಯಂ ॥ ೧೫೧ ॥

ಧೌಮ್ಯಂ.—ಇಂದಿದು ಇಂದ್ರದೇವತಾಕವಾದಯೋಗಂ. ನಿನಗಿದು ಸರ್ವಾರ್ಥಸಾಧನಮಾದುದು ಈಗಳ್ ಬಿಜಯಂಗೆಯ್.

ಅರ್ಜುನಂ.—ಅನುಗೃಹೀತನಾದೆಂ. (ಎಂದು ತೆರಳ್ವಂ).

ಯುಧಿಷ್ಠಿರಂ.—(ಅರ್ಜುನನ ದಾರಿಯಂ ನೋಡುತ್ತೆ) ಪೂಜ್ಯರೆ ! ವತ್ಸನಾಗಳ್ ಅತಿದೂರಮೆಯ್ದಿದಂ. ಇನ್ನವನಂ ಅಗಲ್ದಿಪ್ಪುದೆಂತೊ ? ಬಿಸಿಲ್ ಈ ಯೆಡೆಯೊಳ್ ಚುರುಚುರ್ಗಂಬಿಸಿಲ್ ಪೆರ್ಚಿತು. ಛಾಯಾತರುಗಳ ತಣ್ಣೆಳಲೊಳ್ ಕುಳ್ಳಿರ್ದು ನಿಪ್ಪೊಸತಪ್ಪ ವತ್ಸನ ಅಗಲ್ಕೆವೇಗೆಯಿಂ ಬೇಗುದಿಗುದಿವೆರ್ದೆಯಂ ಇನಿಸು ಸಂತವಿಡುವಂ.

(ಎಂದೆಲ್ಲರುಂ ತೆರಳ್ವರ್).

— ಇಂತಿದು ಪಂಚಮಾಂಕಂ —



---

ಕರವಾಳ್ವಿಲ್ಗಣೆ—ಕತ್ತಿ, ಬಿಲ್ಲು ಬಾಣ.

# ಷಷ್ಠಾಂಕಂ.

(ಬೞಿಕೆ ದುರ್ವಾಸೋಮುನಿ ಪುಗುಗುಂ)

ಪರಾತ್ಪರನಪ್ಪ ಆಪರಮೇಶ್ವರನ ಸಂದರ್ಶನಕೆಂದು ಇಂದು ಕೈಲಾಸಕೆ ಪೋಗಿರ್ದ್ದೆಂ. ಅತ್ತಲ್ ಮಹಾದೇವನಿರಂ. ಪಾರ್ವತೀಸಮೇತನಾಗಿ ನೆಲದೊಳ್ ಈಚಳವೆಟ್ಟಿನ ತಪ್ಪಲೊಳ್ ಬಿನದಿಸುತೆ ಸಂಚರಿಪನೆಂದೆನಗೆ ತೋರುಗುಂ. ಸತ್ಯಸಂಕಲ್ಪನಾದ ಆದೇವನತ್ತಲಿರ್ಕ್ಕೆ ಇತ್ತಲಿರ್ಕ್ಕೆ ಮೇಣುತ್ತಲಿರ್ಕ್ಕೆ; ಜಗದ್ವ್ಯಾಪಾರವೆಲ್ಲಮುಂ ಆತನ ಸಂಕಲ್ಪದಂತೆಯೆ ಕುಂದಿಲ್ಲದೆ ನಡೆಗುಂ. ಆತಂ ಮಹಾಮಹಿಮಂ. ಆತನಂ ಕೆಲರರಿಯದರ್ ಮಹಾಘೋರನೆನ್ಗುಂ. ಆಜಗನ್ಮಂಗಳಮೂರ್ತಿಗೆ ಘೋರಮೆಂದುಂ ಶಿವಮೆಂದುಂ ಈರೊಡಲುಂಟು. ಘೋರಮೆಂಬೊಡಲ್ ಕಿರ್ಚ್ಚು ಮಿಂಚು ಸಿಡಿಲ್ ಮುಂತಪ್ಪ $ಬೆಂಬುರುಳ್ಗಳಿಂ$ ತೀವಿರ್ಕ್ಕುಂ. ಪೆರತೊಂದು ಅರಂ ಚಂದಿರಂ ನೀರ್ ಮೊದಲಾದ ಸೌಮ್ಯವಸ್ತುಗಳಿಂ ಬಗೆವುಗೆ ಕಣ್ಗೊಳ್ಗುಂ. ಘೋರಮಪ್ಪೊಡಲಿಂ ಜಗಮುಂ ಸಂಹರಿಪಂ. ಶಿವಮೆನಿಪೊಡಲಿಂ ಜಗಮುಂ ಸೃಜಿಸಿ ಪಾಲಿಸುವಂ. ಆತನಿಂ ಸರ್ವಶಕ್ತನಾರ್? ಆತನೊಳ್ ಅಸಾಧಾರಣಮೆನಿಪ ಪರಮತ್ವಮಹತ್ತ್ವಂಗಳುಂ ಮೇಣ್ ಈಶ್ವರತ್ವಮುಂ ನೆಲಸಿರ್ಪ್ಪುದರಿಂ ಸೂರಿಗಳ್ ಪರಮೇಶ್ವರನೆಂದುಂ ಮಹೇಶ್ವರನೆಂದುಂ ನುಡಿವರ್. ಸಕಲ ದೇವರೊಳಂ ಮಹಾತ್ಮನಾದುದರಿಂ ಮಹಾದೇವನೆಂಬರ್. ನಿದ್ರಾಭಯಂಗಳೆಂಬ $ಸರೀಸೃಪಂಗಳಿಂ$ ಹಿಂಸಾದಿತರಂಗಂಗಳಿಂ $ತೃಷ್ಣಾವರ್ತದಿಂ$ ದಾರಪಂಕದಿಂ ಅಗುರ್ವಿಪ ತಡಿಯಿಲ್ಲದ ಸಂಸಾರಸಾಗರದೊಳ್ ಮುಳುಂಗದೆ ಆಪರಶಿವನಂ ಆರಾಧಿಪರ್ ಧನ್ಯರ್. ಆ ದೇವನ ಚರಣಸಂದರ್ಶನಮಿಲ್ಲದೆ ಎನ್ನಮನಂ ಬರ್ಚ್ಚಣಮುಂ ನಿಲ್ಲ

ಬೆಂಬುರುಳ್ಗಳಿಂ_ಬಿಸಿದಾದ ವಸ್ತುಗಳಿಂದ; ಸರೀಸೃಪ-ಹಾವು, ತೃಷ್ಣಾವರ್ತ ಆಸೆಗಳೆಂಬ ಸುಳಿ.

'ರಿಂ ತಳ್ವದೆ ಚಿನ್ಮಯಮೂರ್ತಿಯನಾರಯ್ದಪೆಂ. (ಎಂದು ಕಿರಿದುದೂರಂ ಸಾರ್ದು ನೋಡಿ) ಅದಾರಿತ್ತಲ್ ಗುರುಗುಮ್ಮನೆ ಪ್ರಚ್ಛನ್ನನಾಗಿ ಬರುತಿರ್ಪ್ಪಂ, (ಸಾಚೆನೋಡಿ) ಆಃ! ಅಹಲ್ಯಾಜಾರನಿವಂ. ಅದೇನಿತ್ತಲ್? ಬಳ್ಳಿತು ವಿಚಾರಿಪಂ.

ಇಂದಿರಂ.—(ಪೊಕ್ಕು ದುರ್ವಾಸನಂ ಕಂಡು ಚಕಿತನಾಗಿ) (ಆತ್ಮಗತಂ) ಇದೇಂ ಮಹಾಪ್ರಭಾವರಾದ ದುರ್ವಾಸೋಮುನಿಗಳ್. ಅರರೆ! ನಿಸರ್ಗಕೋಪನರಾದ ಇವರ ಕಣ್ಗೆವಂದೆನೇಕೆ? ಇಂದು ಇವರಂ ನೋಳ್ಪಗಳ ಎನ್ನೆರ್ದೆ ಕದಕ್ಕದಿಸುಗುಂ. ಇನ್ನೇನನರ್ಥವೆನಗಪ್ಪುದೋ! (ಬಳಿಸಾರ್ದು) ಪೂಜ್ಯರ್ಗೆ ವಂದಿಪೆಂ.

ದುರ್ವಾಸಂ.—ಅದಾರಿಂದಿರನೋ?

ಇಂದಿರಂ.—ಅಪ್ಪುದು. ಆಕಸ್ಮಿಕಮಪ್ಪ ನಿಮ್ಮ ಸಂದರ್ಶನದಿಂ ಧನ್ಯನಾದೆಂ.

ದುರ್ವಾಸಂ.—ಅದಿರ್ಕ್ಕೆ. ಅದೇನಿತ್ತಲ್ ನೀಂ ಬಂದುದು?

ಇಂದಿರಂ.—ಪೂಜ್ಯರೆ! ಸರ್ವಜ್ಞರಾದ ನಿಮಗೆ ತಿಳಿಯದುದಾವುದು?

ದುರ್ವಾಸಂ.—ಆಬಿನ್ನಣದ ನುಡಿಗಳಂತಿರ್ಕ್ಕೆ. ಅದೇನುಸಿರ?

ಇಂದಿರಂ.—(ಆತ್ಮಗತಂ) ಇವರೊಳ್ ಮಾತನಾಡುವುದೆಂತಕಟ! (ಪ್ರಕಾಶಂ) ಪೂಜ್ಯರೆ! ಆಣತಿಯಾದೊಡೆ ಬಿನ್ನವಿಪೆಂ.

ದುರ್ವಾಸಂ.—ಮೊದಲೆ ಉಸಿರೆಂದೆಂ. ಮತ್ತಮೇನಾಣತಿ? ಅದೇನುಳ್ಳೊಡಂ ಸರಕ್ಕನೆ ನುಡಿ.

ಇಂದಿರಂ.—ಪೂಜ್ಯರೆ!

ದುರ್ವಾಸಂ.—ಎನಿತುಸೂಳ್ "ಪೂಜ್ಯರೆ." ಆಂ ಪೋಗವೇಳ್ಕುಂ. ಉಳ್ಳುದಂ ಚೆಚ್ಚರಂ ಉಚ್ಚರಿಪುದಾಗದೇ?

ಇಂದಿರಂ.—(ಆತ್ಮಗತಂ) ಇಂತಪ್ಪರೊಳ್ ನುಡಿವುದಾರ್ಗಮರಿದು. (ಪ್ರಕಾಶಂ) ಶ್ರೀಮದ್ವೇದವ್ಯಾಸಮಹರ್ಷಿಗಳಿಂ ಪ್ರೇರಿತನಾದ ಕುಮಾರಾರ್ಜುನಂ ಪರಮಾಸ್ತ್ರಮಂ ಬಯಸಿ ಪರಮೇಶ್ವರನಂ ತಪದಿಂ

ಆರಾಧಿಸಲ್ ಇಂದ್ರಕೀಲಗಿರಿಯತ್ತಲ್ ಪೋಗುತಿರೆಯಿರೆ ಆಂ ಅವನ ದಿಡನಮಂ ಪರಿಕಿಸಲ್ ಭೂಸುರವೇಷಮಂ ಕೈಕೊಂಡು ಅವನ ಬಳಿಗೆಯ್ದಿದೆಂ.

ದುರ್ವಾಸಂ-ಮುಂದಣದುವಂ ಭೋಂಕನೆ ನುಡಿ.

ಇಂದಿರಂ-ಆಂ ಅವನಂ ಕಂಡು "ನೀನಾರ್? ಈ ಬೆಟ್ಟನತ್ತಣ್ಗೆ ಏಕೆವಂದೆ? ನೋಳ್ಪೊಡೆ ನೀಂ ತಪಸಿಯಂತೆ ಕಾಣ್ಬೆ. ಆರಸಂಬೊಲ್ ಬಿಲ್ಸರಲ್ಗಳುಮಂ ಪಿಡಿದಿರ್ಪೆ. ಜಗದೊಳ್ ಸಲ್ಲದ ಈ ವೇಸದಿಂ ಏಂ? ಉಪಶಾಂತವಪ್ಪ ಈ ಪುಣ್ಯಕ್ಷೇತ್ರದೊಳ್ ಬಿಲ್ಸರಲ್ಗಳಿಂ ಅಪ್ಪುದೇಂ? ಬಿಲ್ಲಂ ತೊಟ್ಟನೆ ಬಿಸುಡು. ಅದೇಕೆ ಬರಿದೆ ಪಳಗೀಡಾದಪರ್ಯ್? ಎಂದುಸಿರ್ದೆಂ.

ದುರ್ವಾಸಂ-ಬಳಿಕಂ ವತ್ಸಂ ಅರ್ಜುನಂ ಏನೆಂದಂ?

ಇಂದಿರಂ-ಅದಕ್ಕರ್ಜುನಂ "ಇದರಿಂ ಎನ್ನಂ ಪಳಿವೊಡೆ ಪಳಿಗೆ. ಎಂದಿಂಗಂ ಬಿಲ್ಲಂಬಿಡೆಂ. ಅಂತರಂಗದೊಳ್ ಪರಶಿವನಂ ಪರಮಭಕ್ತಿಯಿಂ ಜಾನಿಸುತಿರೆ ಪೊರಗಣ ಪರಿಜೆನಪ್ಪುದೇಂ? ಮೇಲಣವೇಸಂ ಬೇರೆಯಾದೊಡೆ ಮನೋಭಾವಮುಂ ಬೇರೆಯೋ? ಕರ್ಪೂರ ಕೊಂಕಿತ್ತಾದೊಡೆ ಸವಿಯುಂ ಕೊಂಕಿತೇ?" ಎಂದು ದಿಟ್ಟದಿಂ ನುಡಿದಂ.

ದುರ್ವಾಸಂ-ಇಂದಿರಾ! ದೇವರಾಜನಾದ ನಿನ್ನ ಕುವರನಲ್ಲವೆ ಅವಂ? ಸ್ಥಿರೋದಾರನಪ್ಪ ಅವನ ವಿಷಯದೊಳ್ ಪೇಳ್ವುದೇಂ?

ಇಂದಿರಂ-(ಆತ್ಮಗತಂ) ಇದೇನೋ ಸೋಜಿಗಂ! ಇಂತಪ್ಪವಾಙ್ಮಧು ಇವರ ವದನಾರವಿಂದದಿಂ ಬಸರ್ದುದು. (ಪ್ರಕಾಶಂ) ಪೂಜ್ಯರೆ! ನಿಮ್ಮ ಚರಣಾನುಗ್ರಹವೆಲ್ಲಮುಂ.

ದುರ್ವಾಸಂ-ಇರ್ಕೆ. ಬಳಿಕೆ?

ಇಂದಿರಂ-ಬಳಿಕ್ಕಂ ಆಂ ಇದಕ್ಕೆ "ವತ್ಸಾ! ನಿನ್ನ ಧೃತಿಗಂ ಮತಿಗಂ ಮೆಚ್ಚಿದೆಂ. ಬೇಳ್ಪುದಂ ಬೇಡು, ಈವೆಂ. ಆಂ ನಿನ್ನ ತಂದೆಯೆನಿಸಿದ ಇಂದಿರಂ" ಎಂದು ನಿಜರೂಪಮಂ ತೋರಿದೆಂ.

ದುರ್ವಾಸಂ-ಬಳಿಕಂ ಬಳಿಕಂ ? ?

ಇಂದಿರಂ-ಬಳಿಕೆ ಕುವರಂ ಎನಗೆ ಮಣಿದು "ಆರ್ಯನೆ! ನಿನ್ನ ದರ್ಶನದಿಂ ಧನ್ಯನಾದೆಂ. ನಿನ್ನತ್ತಣಿಂ ಬಗೆವಗೆಯ ಅಸ್ತ್ರಂಗಳಂ ಅರಿಯಲ್ ಬಯಸುವೆಂ, ಎಂದಂ. ಆನದರ್ಕೆ ಆತನ ಬಿಡಮುರಿಯುತ "ವತ್ಸ! ಕಾಡಿಂಗೆ ಬಂದು ಕಷ್ಟಂಬಡುತಿರ್ಪ ನಿನಗೆ ಅಸ್ತ್ರಂಗಳನೇಂ? ಬಗೆವಗೆಯ ಧನಕನಕವಸ್ತುವಾಹನಾದಿಭೋಗಮಂ ಬೇಡು; ಕುಡುವೆಂ." ಎಂದೆಂ.

ದುರ್ವಾಸಂ-ಅದರ್ಕೆ ಅವಂ ಏನೆಂದಂ?

ಇಂದಿರಂ-ಅದರ್ಕವನಿಂತೆಂದಂ "ಆರ್ಯನೆ! ಆಂ ಧನಕನಕಾದಿಗಳಂ ಪಡೆದು ಭೋಗಿಸಲ್ ಬಂದನಲ್ತು. ನಿಮ್ಮತ್ತಣಿಂ ಪರಿಪರಿಯ ದಿವ್ಯಾಸ್ತ್ರಂಗಳಂ ಕೈಕೊಂಡು ಬರ್ಪುದೆಂದು ಆರ್ಯಯುಧಿಷ್ಠಿರನಿಂ ಬೆಸನಾಂತು ಬಂದಿರ್ಪೆಂ. ಆಂ ಅಂತೆಸಗದೆ ಕಾಡಿನೊಳ್ ಕೋಟಲೆವಡುತುಂ ಪಗೆಗಳಂ ಗೆಲಲ್ ನೆರವಂ ಪಾರುತುಮಿರ್ಪ ಆರ್ಯಯುಧಿಷ್ಠಿರಾದಿಗಳಂ ಬಂಚಿಸಿ ನಶ್ವರಮಪ್ಪ ಭೋಗಕ್ಕೆ ಆಸೆವಟ್ಟು ಪಳಿಗೀಡಾಗುವನಲ್ತು." ಎಂದಂ.

ದುರ್ವಾಸಂ-ಆತನ * ಮೆಯ್ವಳಿಗೀನುಡಿ ತಕ್ಕುದು. ಆಯ್ತು ಬಳಿಕೆ?

ಇಂದಿರಂ- ಆಂ ಅವನಂ ತಳ್ಕೈಸಿ "ಅಣುಗಾ? ನಿನ್ನ ದಿಡಕೆ ಆಂ ಮನವೊಲ್ದೆಂ. ಸರ್ವಲೋಕಶರಣ್ಯನಾದ ಪರಶಿವನ ಚರಣಾರವಿಂದಮಂ ನೀಂ ಎಡೆವಿಡದೆ ಪರಮನಿಯಮದಿಂ ಎಳ್ಚತ್ತು ಪರಿಪೂಜಿಸು. ಘನತರಮಪ್ಪ ನಿನ್ನ ತಪದಿಂ ಆ ಪರಮೇಶ್ವರಂ ಸುಪ್ರೀತನಾಗುವಂತೆ ತಕ್ಕ ನಡೆವಳಿಯೊಳಿರು ನೀಂ. ಪರಮೇಶ್ವರನ ಪರಮಾನುಗ್ರಹದಿಂ ನೀಂ ಕೃತಕೃತ್ಯನಾಪ್ಪೆ. ಆ ಪರಶಿವನ ಅನುಗ್ರಹಂ ನಿನಗೆ ಆಗಲೊಡಂ ಆವೆಲ್ಲರುಂ ನಿನಗೆ ಅಪ್ರಾರ್ಥಿತರಾಗಿ ಬಸೆವೆವು. ನಿನಗ

---

* ಮೆಯ್ವಳಿ- ಯೋಗ್ಯತೆ.

ಕ್ಕೆ ಶುಭಂ ಭದ್ರಂ ಮಂಗಳಂ.” ಎಂದು ಪರಸಿ ಮಯ್ಗರೆದು ನಡೆಗೊಂಡು ಅಮರಾವತಿಗೆ ಪೋಗುತಿರ್ದ್ದಪೆಂ.

ದುರ್ವಾಸಂ— ಇಂದಿರಾ! ನೀಂ ನಲ್ಲೊಸಗೆಯನೆ ಕೇಳಿಸಿದಯ್. ಅನ್ನನಂ ಗುಣಸಂಪನ್ನನಂ ಆತ್ಮಜನ್ಮನಂ ಪಡೆದ ನೀಂ ಧನ್ಯತಮನೆ. ಯುಧಿಷ್ಠಿರಪ್ರೇರಿತನಾದ ಆಕುಮಾರನರ್ಜುನಂ ಘನಮಪ್ಪಭಕ್ತಿಯಿಂ ತಪಮಿರ್ದ್ದು ಪರಮೇಶ್ವರನಂ ಒಲಿಪುದುಂ ನನ್ನಿ. ಭಕ್ತವತ್ಸಳನಪ್ಪ ಪರಮೇಶ್ವರಂ ಅವನ ಬಕುತಿಗೆ ಮೆಚ್ಚಿ ಭೋಂಕನೆ ತಾಂ ಇದಿರ್ವಂದು ಅನುಗ್ರಹಿಪುದುಂ ನನ್ನಿ. ನೀಂ ಸಂದೆಗಂಬಡದಿರ್. ಕುಮಾರಾರ್ಜುನಂ ಪರಮೇಶ್ವರನ ಅನುಗ್ರಹದಿಂ ಕಳೆವೆರ್ಚಿ ಮೂಜಗದೊಳ್ ನುತಿಗೆಬರ್ಪಂ. ಅವನ ಬೆಳ್ಜಸಂ ದೆಸೆಮುಟ್ಟೆ ಪರ್ಬುಗುಂ.

ಇಂದ್ರಂ— ಪೂಜ್ಯರ ನುಡಿ ಬೇರೆಯಪ್ಪುದೆ? ತಮತು ವಿಜಯಮಂಗಳಾಶಾಸನದಿನೆನತುಮನಂ ನಲ್ದು ನರ್ತಿಸುಗುಂ. ಇನ್ನೆನಗೆ ಆಣತಿಯನಿತ್ತೊಡೆ ಅಮರಾವತಿಗೆ ತೆರಳ್ವೆಂ ತಮ್ಮ ವಿಜಯಯಾತ್ರೆಯೆತ್ತಲೆಂದು ಬೆಸಗೊಳಲ್ ಅಂಜುವೆಂ.

ದುರ್ವಾಸಂ— ಇಂದಿರಾ! ಪರಮೇಶ್ವರನ ಚರಣಸಂದರ್ಶನಕೆ ಕೈಲಾಸಕೆ ಪೋಗಿರ್ದ್ದೆಂ. ದೇವಂ ಅತ್ತಲಿಲ್ಲದಿರೆ ಪಾರ್ವತೀಸಮೇತನಾಗಿ ಹಿಮಗಿರಿಪ್ರಾಂತಂಗಳೊಳ್ ನಡೆಪಾಡುತ್ತುಂ ಬಿನದಿಸಿದಪನೆಂದರಿತು ಈಗಳಾತನ ಸನ್ನಿಧಾನಕೆ ಸಾರ್ದಪೆಂ. ಒಳ್ಳಿತು. ನೀನಮರಾವತಿಗೆ ಪೊರಮಡು. ಆನುಮಿತ್ತಲ್ ತೆರಳ್ದಪೆಂ. (ಎಂದು ತೆರಳ್ವಂ).

ಇಂದ್ರಂ.— ಆಃ! ಆಂ ಇಂದುಗಡ ಅದಿತಿಯ ಬಸಿರೊಳ್ ಬಂದೆಂ. ಇಂದೆನ್ನ ಪುಣ್ಯವಿಶೇಷದಿನೆ ಸುಲಭಕೋಪರಾದ ಈ ಮುನೀಂದ್ರರ ಹಸಾದಂ ಎನ್ನೊಳ್ ಹಸನಾಯ್ತು. ಇನ್ನೊರ್ಮೆ ಆನಿವರ ಕಣ್ಗೆ ಬೀಳ್ವನ್ನಂ ಎನಗೆ ಪೆಳರೇಂ? “ಬೀಸುಂಗೋಲ್ ತಪ್ಪಿದೊಡೆ ನೂರ್ಬರಿಸಮಾಯಿಸಂ” ಇರ್ಕ್ಕೆ. ಈ ಮಹಾಮುನೀಂದ್ರರ ನುಡಿಯಿಂ ಕುಮಾರಾರ್ಜುನಂ ಘನತಪೋನಿಧಿಗಳೆನಿಸಿದ ರಿಸಿಗಳುಮಂ ಮೀರಿ ತಪಮಿರ್ದ್ದು ಪರಮಾರ್ಥಪ್ರದನಂ ಪರಶಿವನಂ ಮೆಚ್ಚಿಪನೆಂದು

ದಿಡಮರಿವೆಂ. ಇನ್ನೀ ಸಂತಸದ ಸುದ್ದಿಯು $ಬಿಳ್ತಂ$ ಈಗಳ್ $ಬದಿ*ಲದೊಳ್$ ಬಿತ್ತುವೆಂ (ಎಂದು ತೆರಳ್ವಂ)

॥ ಇದು ವಿಷ್ಕಂಭಕಂ. ।

(ಬಳಿಕೆ ರಿಸಿಯೊರ್ವ್ವಂ ಕದುಬುಗೊಂಡು ಪುಗುವಂ.)

ಅಕಟಕಟ! ಅಕಟಕಟ!! ಅಂತಪ್ಪ ತವಸಿಯುನೆಂದುಂ ಕಾಣೆಂಕೇಳೆಂ. ಆತಂ $ಅದೆನ್ನಂ$ ಮಾಪುರುಸನೋ! ಅಬ್ಬ! ಆತನ ತಪದುರಿ ರಿಸಿಗಳ ಎಲೆವನೆಗಳನೆಲ್ಲಂ ಚುಚ್ಚುರ್ತಿಕ್ಕುಂ. ಕೆಲ ದಿನದಿಂ ತಪವಿರ್ಪ ಆತನ ತೇಜಂ ಪಲಸಾಸಿರ್ಬರಿಸಂ ತಪವಾಚರಿಸುತಿಪ್ಪರ್ಗ್ಗಂ ಪಡೆಯಲಸದಳಂ. ಏಗೆಯ್ವುದು? ಇನ್ನಕಟ ಸೈರಿಸಲಾಗದು. (ತಿರುಗಿನೋಡಿ) ಆಃ! ಇದೇಂ ಆ ಯಿಂದ್ರಕೀಲಾದ್ರಿಯೊಳ್ ವಾಸಿಪ ರಿಸಿಗಳೆಲ್ಲರುಂ ಕದುಬುಗೊಂಡು ನಿಟ್ಟೋಟದಿಂ ಇತ್ತಲ್‌ಎಯ್ತರುತಿರ್ದ್ದಪರ್. ಇವರುಂ ಎನ್ನವೊಲೆ ತತ್ತಪೋಜ್ವಾಲೆಯುಂ ತರಹರಿಸಲಾರದೆ ಬರ್ಪರಕ್ಕುಮೆ? ಬಳ್ಳಿತು, ಬರ್ಕ್ಕೆ; ವಿಚಾರಿಪೆಂ. (ಎಂದು ನೋಡುತಿರ್ದ್ದಪಂ)

(ಬಳಿಕೆ ಕೆಲಬರ್ ರಿಸಿಗಳ್ ಕದುಬಿನಿಂ ಪುಗುವರ್)

ಮೊದಲಿಗಂ — (ನೋಡಿ) ಏನಿದೇಂ ಇನಿತು ಕದುಬುಗೊಂಡು ಇರ್ಪಿರ್? ಇಂತೋಡಿ ಬರುತಿರ್ದ್ದಪಿರ್? ಅದಾರತ್ತಣಿನಂಜಿದಿರ್?

ಎರಡನೆಯುವಂ.— (ಮೊದಲಿಗನಂ ನೋಡಿ) ನೀವಾರ್? ಎಲ್ಲಿದರ್? ಆ ಯಿಂದ್ರಕೀಲಾದ್ರಿಯೊಳ್ ನೀಂ ವಾಸಿಸಿರೆ?

ಮೊದಲಿಗಂ.—ಅಪ್ಪುದು.

ಎರಡನೆಯುವಂ.—ಅಂತಾದೊಡೆ ಏನುಮನರಿಯುದವರಂತೆ ವಿಣ್ಣನೆ ನುಡಿವಿರ್. ಈಗಳೋ ನೀವೇಳಪುದು? ಸಾಲ್ಗುಂ ಸಾಲ್ಗುಂ. ತೆಗೆಯಿಂ ತೆಗೆಯಿಂ.

ಬಿಳ್ತಂ—ಬೀಜವನ್ನು; ಬದಿಲದೊಳ್—ಸ್ವರ್ಗದಲ್ಲಿ ಅದೆನ್ನಂ—ಅದ್ಭುತಕ

ಮೊದಲಿಗಂ—ಅದೇತಕ್ಕಿಂತು ಕನಲ್ದಪಿರ್? ಆನುಂಬಲ್ಲೆಂ. ಅದಕ್ಕೀಗೆಯ್ವುದು? ಉಪಾಯಮೇಂ? ಪೇಳಿಂ.

ಮೂರನೆಯವಂ.—ಅದಕ್ಕುಪಾಯಮೇಂ? ಇನ್ನೆತ್ತಲಾನುಂ ಪೋಗಿ ಪಾಸಿಪ್ಪುದು.

ಮೊದಲಿಗಂ.—ಇದುಗಡ ನಲ್ನುಡಿ. ನಿಮಗೇಂ ಮರುಳೋ? ಆತನ ತಪದ ಬೇಗೆ ಮೂಲೋಕಮುಮಂ ಜುಂಜುಕ್ಕಿತಿಕ್ಕುಗಂ. ಅಂತಿರೆಯುದೆಲ್ಲಿಗಡ ಪಾಸಿಸಲಕ್ಕುಂ. ಬರುಪಾತುಗಳನೇಂ?

ಮೂರನೆಯವಂ—ಆದೊಡೆ ನೀವೇನಂಗೆಯ್ವುದೆಂದು ಪೇಳ್ವಿರ್? ಪೇಳಿಂ; ನೀಂ ಪೇಳ್ದಂತೆ ಆವೆಲ್ಲರುಂ ನಡೆವೆವು.

ಮೊದಲಿಗಂ.—ಆನೇವೇಳ್ವೆಂ?

ಎರಡನೆಯವಂ—ಏನಮ್ಮನೇ ಬೆಸಗೊಂಡಪಿರೋ? ಭಳಿರೆ! ಪೇಳ್ವೊಡೆ ಥಟಕ್ಕನೆ ಪೇಳಿಂ. ಇಲ್ಲದೊಡೆ ಆನರಿಯೆನೆನ್ನಿಂ.

ಮೊದಲಿಗಂ.—(ಇನಿಸು ಚಿಂತೆಯುನಭಿಯಿಸಿ) ಆನರಿಯೆಂ.

ಮೂರನೆಯವಂ—ಇನಿತಂ ಪೇಳಲೆನಿತು ಪೊಳ್ತು?

ಎರಡನೆಯವಂ.—ಇವರರಿವರ್ ಪುಷ್ಕಳಂ ತಿಂದು ತೇಗಲ್.

ಮೊದಲಿಗಂ—ನಿಮಗದರೊಳ್ ಅನುಭವವಿನಿತುಮಿಲ್ಲವೋ?

ಎರಡನೆಯವಂ.—ನಿಮಗಿಪ್ಪನಿತೆನಗಿಲ್ಲಂ.

ಮೊದಲಿಗಂ.—ಅಪ್ಪುದಪ್ಪುದು. ಈ ಗಿರಿವನದೊಳಿರ್ಪ ಕಂದಮೂಲ ಫಲಂಗಳೆಲ್ಲಂ ನಿಮಗೊರ್ವ್ವಗೆ ಗಯೆ ಬೇಳ್ಕುಂ.

ನಾಲ್ಕನೆಯವಂ.—ನೋಡಿದಿರೋ? ಇದುವೆಗಡ ಎಮ್ಮವರ ಸ್ವಭಾವಂ. ತೊಡಗಿದ ಗೆಯ್ತುವೆತ್ತಲೊ ಪೋದುದು. ಆವುದಕ್ಕೆ ಮೋ ಬರಿದೆ ಪೋರಾಡುವಿರ್? ಎನಿತನಾದೊಡಂ ತಿನ್ಗೆ. ನಿಮ್ಮ ಸೊಮ್ಮೇಂ ಪೋದುದು?

ಮೊದಲಿಗಂ.—ಎಮಗೇಂ ನಿಮಗೇಂ? ಎನಿತನಾದೊಡಂ ತಿನ್ಗೆ. ಇವರಾಡಿದರ್ ಆನುಮಾಡಿದೆಂ.

ನಾಲ್ಕನೆಯವಂ.— ಎನಗೊಂದುಪಾಯವಿಂದು ತೋರುಗುಂ. ಪೇಳೆಂದೊಡೆ ಪೇಳ್ವೆಂ.

ಮೂರನೆಯವಂ.—ಎಮ್ಮವರೊಳ್ ನೀಮೆಂಗಡ ಪಿರಿಯಿರ್. ಮೇಣ್ ಬಲ್ಲರ್ ಅನುಭವಿಗಳ್. ನೀಂ ಪೇಳ್ವುದೆಲ್ಲರ್ಗ್ಗಂ ಅಭಿಮತವಾಗಿರ್ಕ್ಕುಂ; ಪೇಳಿಂ.

ನಾಲ್ಕನೆಯವಂ.—ಅದೇನೆನೆ '— ಬರಿದೆ ಆಳೋಚಿಪುದು ಏವಾಳ್ತೆ? "‡ಶಿವಧಾಶಿವಧಾ‡" ಎಂದು ಮೊರೆಯಿಡುತ್ತುಂ ಆರ್ತತ್ರಾಣಪರಾಯಣನುಂ ಸರ್ವಶಕ್ತನುಂ ಪಾರ್ವತೀವಲ್ಲಭನುಂ ಆದ ಜಗದೀಶ್ವರನ ಚರಣಸನ್ನಿಧಿಯನೆಯ್ದಿ ಆತನೊಳ್ ಎಮ್ಮ ಬಾಗುಳವುಂ ಬಿನ್ನವಿಸಿಕೊಂಡೊಡೆ ಸರ್ವಶರಣ್ಯನುಂ ಕೃಪಾನಿಧಿಯುಂ ಆದ ಆ ಭಗವಂತನಂತಾನುಂ ಎಮ್ಮನುದ್ಧರಿಪಂ. ಇದು ನಿಮಗೆಲ್ಲಂ ಸಮುಚಿತವಾಗಿರ್ಪ್ಪೊಡೆ ಆ ಜಗದೀಶ್ವರನೆಡೆಗೆ ಪೋಪಂ.

ಎರಡನೆಯವಂ.—(ನಕ್ಕು) ಜಗದೀಶ್ವರನೆಂದೊಡೇಂ? ಚರಣಸನ್ನಿಧಿಯೆಂದೊಡೇಂ? ಆವೆಂದೊಡೇಂ? ಪೋಪುದೆಂದೊಡೇಂ? ಬಿನ್ನವಿಪುದೆಂದೊಡೇಂ? ನಿಮಗೇಂ ಮರುಳೋ? ನರಿಯು ಕೂಗು ನಾಕಲೋಕವುಂ ಮುಟ್ಟುವುದೇ? ಕಪ್ಪೆ ಕೂಗಿದೊಡೆ ಮಳೆ ಬರ್ಪ್ಪುದೇ?

ಮೂರನೆಯವಂ.—ಅದೇಕಿಂತು ನೀವೇಳಪಿರ? ಇವರ್ ಪೇಳ್ವುದು ಸರ್ವೋತ್ತಮುವಪ್ಪಾಳೋಚನೆ. ಭಕ್ತಸುಲಭನಾದ ಮಾದೇವನ ಸಂದರ್ಶನವೆಮಗೆ ಸುಲಭವೆನೆ ಏಕೆ ದೊರೆವುದಾಗದು?

(ಆಗಸದಲ್ಲಿ)

ಎಲೆ ರಿಸಿಗಳಿರ! ಭಕ್ತಸುಲಭನಾದ ಮಾದೇವನ ಸಂದರ್ಶನಕೆ ನೀಂಗಳ್ ನೀಡುಂ ಪ್ರಯತ್ನಿಪುದಿಲ್ಲಂ. ಆಪರಮೇಶ್ವರಂ ಪಾರ್ವತೀಸಮೇತನಾಗಿ ಬಿನದಿಸಲೆಂದು ಈ ಚಳವೆಟ್ಟಿನ ಗೆಂಟನತಳ್ಪಲೊಳ್ ವಿಹರಿಸುತಿರ್ದ್ದಪಂ. ಅಂ ಆತನ ಚರಣಾರವಿಂದಸಂದರ್ಶನದಿಂ

‡ ಶಿವಧಾ—ಮೊರೆಯಿಡುವ ನುಡಿ.

ದಾನಂದತುಂದಿಲನಾಗಿ ಬರುತಿರ್ದ್ದಪೆಂ. ನೀನತ್ತಲೆಯ್ದಿ ಆತನಂ ವರೆವುಗಿಂ.

ಎಲ್ಲರುಂ.-(ಶಿಕ್ಷಸವುನಭಿನಯಿಸಿ) ಎತ್ತಣುತ್ತ ನಲ್ನುಡಿಯಿದು ?

ನಾಲ್ಕನೆಯವಂ.- (ಚಿಂತಿಸಿ) ಅದಾರೊ ಪರಮೇಶ್ವರನ ಸಂದರ್ಶನಮಂ ಕೈಕೊಂಡು ಮರಲ್ದು ಬರುತಿರ್ಪ್ಪ ಮಹನೀಯರ್. ಎಮ್ಮ ಸಲ್ಲಾಪಮನಾಲಿಸಿ ಕರುಣದಿಂ ದೂರದೊಳ್ 'ಎಮಗೆ ನುಡಿದಪರ್. ಇವರಾರಿರ್ಪರಕ್ಕುಂ. ? (ಮೇಲೆನೋಡಿ) ಪೂಜ್ಯರೆ ನೀವಾರ್ ?

(ಆಗಸದಲ್ಲಿ) ಆಂ ದೂರ್ವಾಸಂ.

ನಾಲ್ಕನೆಯವಂ.- ಆದೊಡೆ ನಿಮ್ಮ ವಚನಾಮೃತದಿನಾಂ ಧನ್ಯರಾದೆಂ. ನಿಮಗಿತ್ತಣಿನೆ ಸಾಷ್ಟಾಂಗವಂದನಂ.

ಮೂರನೆಯವಂ.-ಅಂತಾದೊಡೆ ಇನಿತು ದೂರಂ ಸಾರ್ದ್ದು ಜಗದೊಡೆಯನಂ ಅರಸುವಂ ಬನ್ನಿಂ. (ಎಂದು ಸ್ವಲ್ಪದೂರಂ ಸಂಚರಿಸುತಿರ್ಪುದುಂ) (ತೆರೆಯಲ್ಲಿ)

ಬಾರಿತ್ತಲ್ ಕಣ್ಗೊಳಿಸುತಿರ್ಪ್ಪ ಮನೋಹರವೂದ ಶಿಲಾವೇದಿಕೆಯೊಳ್ ನಸುವ್ರೊಳ್ತು ಕುಳ್ಳಿರ್ಪಂ.

ನಾಲ್ಕನೆಯವಂ.-(ಆಲಿಸಿ) ಇದಾತರ್ುನಣ್ಪಿನ $ ಗುಣ್ಪಿನ $ ಸೊಬಗುನುಡಿ ? ಬಾರೆಂದು ಮತ್ತೊರ್ವರನಧಿಕರಿಸಿ ನುಡಿವಂತಿಕ್ಕುಂ.

(ತೆರೆಯಲ್ಲಿ ಮತ್ತೆ)

ಎಲೆನಂದಿ ! ಇತ್ತಲದಾರುಮಂ ಬಿಳವುಗಿಸಲಾಗದು.

ನಾಲ್ಕನೆಯವಂ.-(ಆರಯ್ದು) ಆಃ " ಎಲೆನಂದಿ " ಎಂದು ಸಂಬೋಧಿಪುದಂ ಬಗೆಯೆ ಪಾರ್ವತೀಪತಿ ಪರಮೇಶ್ವರನೇ ಇತ್ತಲ್ ಬಿಜಯಂಗೆಯ್ದಿರ್ಪ್ಪನಕ್ಕುಂ. ಒಳ್ಳಿತು; ಇತ್ತಲದೂರದೊಳ್ ಈ ಮಹಾದೇವನ ನಾಮಸಂಕೀರ್ತನಮಂ ಗೆಯುತೆ ತತ್ಕಾವಸರವಂ ಪಾರುತಿರ್ಪ್ಪಂ.

(ಎಂದೆಲ್ಲರುಂ ದೂರಂ ಮರೆಯೊಳೊಂದೆಡೆ ನಿಲ್ವರ್)

$ ಗಾಂಭೀರ್ಯ.

(ಬಳಿಕ ಶಿಲಾವೇದಿಕಾರೂಢರಾದ ಪಾರ್ವತೀಪರಮೇಶ್ವರರುಂ ನಂದಿಯುಂ ಪುಗುವರ್)

ಪರಮೇಶ್ವರಂ.-ಎಲೆದೇವಿ ! ನೀಂ ಅದೇನನೋ ಬೆಸಗೊಳ್ವಳಂತೆ ಕಾಣ್ಬೆ.

ಪಾರ್ವತಿ.-ಪರಮೇಶ್ವರನೆ ! ಸರ್ವಜ್ಞನಪ್ಪ ನಿನ್ನನಲ್ಲದೆ ಇನ್ನಾರಂ ಬೆಸಗೊಳ್ವುದು ?

ಪರಮೇಶ್ವರಂ.-ಅದೇಂ ಬೆಸಗೊಳ್.

ಪಾರ್ವತಿ.-ಜಗದೊಡೆಯನೆ ! ನಿಚ್ಚವುಂ ನಿನ್ನಂ ಪರಿಪರಿಯ ಸಂಗತಿಗಳಂ ಬೆಸಗೊಳುತಿರ್ದಪೆಂ. ಸರ್ವಜ್ಞನಪ್ಪ ನಿನಗೆ ಬೇಸರಣಮಾಗದಲ್ತೆ.

ಪರಮೇಶ್ವರಂ.-ಪ್ರಿಯೆ ! ನಿನ್ನ ಪ್ರಶ್ನೆಗಳ್ ಲೋಕಾನುಗ್ರಹಾರ್ಥಂಗಳಾಗಿರ್ಕುಂ. ಅದರಿನಂತಪ್ಪ ವಿಷಯಂಗಳೊಳ್ ಎನಗೆ ಪಿರಿದು ಮಚ್ಚರುಂಟು.

ಪಾರ್ವತಿ.-ಪ್ರಾಣೇಶನೆ ! ನಿನ್ನ ನೊಸಲೊಳ್ ಮಹಾತೇಜಮಪ್ಪ ಮೂರನೆಯ ಕಣ್ಣಿದು ಪುಟ್ಟಲ್ ಕಾರಣವೇಂ ?

ಪರಮೇಶ್ವರಂ.-ದೇವಿ ! ಆಲಿಸು ; ಮುನ್ನೊರ್ಮೆ ನೀಂ ಸೂರ್ಯಚಂದ್ರಾತ್ಮಕಮಪ್ಪ ಎನ್ನ §ಕಣ್ಬೊಣರಂ§ ಬಿನದಕೆಂದು ಮುಚ್ಚಿದಯ್. ಅದರಿಂ ಜಗವೆಲ್ಲಂ ಸೂರ್ಯಚಂದ್ರಗ್ರಹನಕ್ಷತ್ರರಹಿತವಾಗಿ ಬೆದರಿ ಮರ್ಬಿನಿಂ ಮುಸುಂಕಿ ತಳ್ಳಂಕಂಬಡೆವುದುಂ ಕೈಗಾಯಲಾಂ ಎನ್ನ ನಿಟಾಲದೊಳ್ §ತಾರ್ತೀಯೀಕ§ ಮೆನಿಪೀಕಣ್ಣಂ ತಳೆದೆಂ.

ಪಾರ್ವತಿ.-ಫಾಲಾಕ್ಷನೆ! ಅಂತಹ ಮರ್ಬಂ ಕಳೆದು ಜಗವೆಲ್ಲಮಂ ಸಲಹಿದ ನೀಂ ಆರ್ತರಾದ ಶರಣಾಗತರ ದುಗುಡಮೆಂಬ ಮರ್ಬಂ ಕಳೆದು ಸಲಹುವುದೇನಚ್ಚರಿ ?

ಜಗದೊಳೆನಿತೊ ದಿವ್ಯಾಯುಧಂಗಳೊಳವು. ಆದೊಡಂ ನೀಂ ಪಿನಾಕಮೆಂಬ ಬಿಲ್ಲನಳ್ತಿಯಿಂ ಪಿಡಿವುದೇಕೆ ?

---

ಕಣ್ಬೊಣರಂ-ನೇತ್ರಯುಗ್ಮವನ್ನು ; ತಾರ್ತೀಯೀಕ-ಮೂರನೆಯದು.

ಪರಮೇಶ್ವರಂ.– ಮುಂ ಕಣ್ವಾವೆಸರ ಕಿತ್ತಡಿಯೊರ್ವ್ವಂ ಪಲವುಂ ಕಾಲಂ ಜಗವೆಲ್ಲಂ ಜಗ್ಗನೆ ತಪವಿರ್ಪ್ಪುದುಂ ಆತನ ನೆತ್ತಿಯತ್ತಣಿಂ ನೊಂದು ಪುತ್ತು ಪುಟ್ಟಿದತ್ತು. ಆಪುತ್ತಿನೊಳೊಂದು ಬಿರುವಿದಿರೊಗೆದತ್ತು. ಸಿರದೊಳಂತಪ್ಪ ಪುತ್ತಂ ಬಳೆಗೊಂಡುಂ ತಪವಿರ್ದ್ದಾತನ ದಿಡತಪಕೆ ಬೊಮ್ಮಂ ಮೆಚ್ಚಿ ತಾನಿದಿರ್ವಂದು ಆಬಿದಿರಂ ಕಂಡು ಇದಂ ಲೋಕಹಿತಾರ್ಥಮನಾಗಿಪೆನೆಂದು ಅದಂ $ಇರ್ಕ್ಕಡಿಗೆಯ್ದು$ ಪಿನಾಕಂ ಶಾರ್ಙ್ಗಂ ಎಂದು ಎರಳ್ಬಿಲ್ಗಳಂ ಸಮೆದು ಎನಗಂ ವಿಷ್ಣುವಿಂಗಂ ಇತ್ತಂ. ಎನತು ಬಿಲ್ ಪಿನಾಕವೆನಿಸಿದುದು. ವಿಷ್ಣುವ ಬಿಲ್ಲಶಾರ್ಙ್ಗವೆಂಬುದು. ಅಂದಿನಿನಳ್ಕರ್ತುರ್ ಈ ಬಿಲ್ಲಂ ಪಿಡಿದಿರ್ಪೆಂ.

ಪಾರ್ವತಿ.–ಎಲೆ ಪಿನಾಕಪಾಣಿಯೆ ! ಅಂತಹಬಿಲ್ಲಂ ಕೈಯೊಳ್ ಪಿಡಿದಿರ್ಪ್ಪ ನಿನಗೆ ದುಷ್ಟದಾನವಸಂಹಾರಂ ಸುಲಭತರಮೆನಿಸಿರ್ಕ್ಕುಂ. ಜಗದೊಳ್ ಎನಿತೋ ಗಜತುರಗಾದಿವಾಹನಂಗಳಿರ್ದ್ದೊಡಂ ಅದೇಕೆ ನೀಂ $ಗೊಂದೆಯಂ$ ಏರುವೈ ?

ಪರಮೇಶ್ವರಂ.- ದೇವಿ ! ಆದಿಸೃಷ್ಟಿಯೊಳಾಕಳೆಲ್ಲಂ ಮಹಾಬಲರೂಪಂಗಳಾಗಿ ಚಂದಿರಂಬೋಲ್ ಬೆಳ್ಪುವಡೆದು ಸೊರ್ಕ್ಕಿನಿಂ ಎಡೆಯಾಡುತಿರ್ದ್ದುವು. ಬನ್ಮೆರ್ ಐಕಿಲ್ವಟ್ಟದೊಳ್ ಜೋಗನಿಟ್ಟೆಯೊಳಿರ್ದ್ದೆನ್ನ ಬಗೆಗೆ ಎಡರನೊಡರಿಸಲ್ ಎಡೆಗೆಯ್ದು ಎನ್ನೊಡಲಂ ನಿಡುಗೋಡುಗಳಿಂ ತಿವಿದು ನೂಂಕಲೊಡಂ ಆಂ ಎಳ್ಚರ್ತು ಕಂಡು ಕನಲ್ದು ಕಿಡಿಕಿಡಿವೋದೆಂ. ಎನ್ನ ಕನಲ್ಕೆವೇಗೆಯಿಂ ಆಕಳ ಕುಳವದೆಲ್ಲಮುಂ ಧಗದ್ಧಗನೆ ಸುಟ್ಟು $ಕರಿಮುರಿವೋಯ್ತು.$ ಬಳಿಕೆ $ಬಾಂದುರು$ ಮರುಕಂಗೊಂಡು ತನ್ನಣುಗನಂ ಬಸವನಂ ಎನಗಡರಲೆಂದು ಮಣಿದೀವುದುಂ ಆನೊಸೆದು ಕಟಾಕ್ಷದಿಂ ಆಕಳಂನೋಡಿದೆಂ. ಆಗಳ್ ಆಕಳ ಕುಳವೆಲ್ಲಮುಂ ಅನಾಕುಳಂ ಕಳಕಳನೆಳ್ದು ಕಳೆಯೇರಿ ಬಗೆವಗೆಯ ಬಣ್ಣಮುಂ ತಳೆದು $ಕಣ್ಗೆಡ್ಡವಾದುವು.$ ಅಂದಿನಿಂ ಜಗದೊಳ್ ಮಗುಳ್ದು ಕರುಗಳ $ಬಳಿವಳ್ಳಿ$ ಮಡಲ್ತುದು. ಪರಮ

ಇರ್ಕ್ಕಡಿ–ಎರಡುಭಾಗ; ಗೊಂದೆ--ವೃಷಭ, ಕರಿಮುರಿ ಸೀಕಲು; ಬಾಂದುರು-_ಕಾಮಧೇನು; ಎಡ್ಡಂ--ಮನೋಹರ; ಬಳಿವಳ್ಳಿ–ವಂಶಲತೆ.

ಪಾವನನಪ್ಪ ಈ ವೃಷಭೇಂದ್ರಂ ಎನಗೆ ವಾಹನಮಾಗಿರ್ಪ್ಪಂ. ಅದು ಪುಮಲ್ಲದೆ ರಯ್ಯವಾದೆನ್ನ ಪಳವಿಗೆಯುಮನಳಂಕರಿಸಿರ್ಪ್ಪಂ.

ಪಾರ್ವತಿ.-ಎಲೆ ವೃಷಭವಾಹನನೆ! ನಿನ್ನ ಕಟಾಕ್ಷಚಂದ್ರಿಕೆ ಅಂತು ಪರಮಾದ್ಭುತವಾದುದರಿಂ ಸಂತಪ್ತರಾದ ಸಂತರಂ ಸಂತತಂ ಸಂತವಿಡುಗುಂ.

ಜಗದೊಳ್ ರಮಣೀಯತರಮುಂ ಲಕ್ಷ್ಮೀಕರಮುಮೆನಿಸಿ ವಿಚಿತ್ರಮೆನೆ ಕಣ್ಗೊಳ್ವ ಪಲವುಂ ನೆಲೆದಾಣಂಗಳಿರ್ದ್ದೊಡಂ ಮಸಣದೊಳ್ ಅದೇಕೆ ನೀಂ ನಿವಾಸಿಪ್ಪೈ?

ಪರಮೇಶ್ವರಂ.-ದೇವಿ! ಆಲಿಸ. ಮುಂ ಬೊಮ್ಮಂ ತಾಂ ಸೃಜಿಸಿದ ‡ಮರುಳ್ಗಳ್‡ ರಕ್ಷಂಗಳ್ ಪ್ರೇತಂಗಳ್ ಮುಂತಪ್ಪ ಭೂತಂಗಳ್ ಲೋಕಭಯಂಕರಭೂತಂಗಳೆನಿಸಿ ಲೋಕಮನೆ ಕೊಲುತೆ ಬರೆವರೆ ಚೋಡಿಸಿ ಆಭೂತಂಗಳಂ ನಿಗ್ರಹಿಸಿ ಲೋಕಮಂ ಕೈಗಾಯ್ವುದೆಂದು ಎನ್ನಂ ಬೇಡಿದಂ. ಆಂ ಅವನಂ ಸಂತವಿಟ್ಟು ಜನಸಂಚಾರವಿಲ್ಲದ ಸುಡುಗಾಡಿನತ್ತಣಿಂ ಅನುವಪ್ಪ ಎಡೆ ಪೆರತೊಂದಿಲ್ಲಮೆಂದು ಲೋಕರಕ್ಷಣಾರ್ಥಂ ಅತ್ತಲಿರುತೆ ಭೂತಂಗಳಂ ನಿಗ್ರಹಿಸಿ ಸ್ವಾಧೀನಮಾಗಿರ್ಪ ಅವ್ರುಗಳೊಡನೆ ರಮಿಸುತಿರ್ದ್ದಪೆಂ.

ಪಾರ್ವತಿ.-ಎಲೆ ಭೂತಪತಿಯೆ! ನೀಂ ಅಂತು ಭೂತಂಗಳಂ ನಿಗ್ರಹಿಸಿರ್ಪ್ಪುದರಿಂದೆ ನಿನ್ನ ಭಕ್ತರ್ ಮಹಾರಣ್ಯದೊಳಂ ನೆಲಸಿನಿಂದು ನಿರ್ಭಯರಾಗಿ ಪಗಲಿರುಳ್ ನಿನ್ನಂ ಜಾನಿಸುತಿರ್ದ್ದಪರ್.

ನಿನ್ನ ರೂಪು ‡ಬಗ್ಗಸಮ್ಮದಿಂ‡ ಭಸ್ಮೋದ್ಧೂಳನದಿಂ ನಾಗಯಜ್ಞೋಪವೀತದಿಂ ತ್ರಿಶೂಲಾದಿಗಳಿಂ ನೋಡೆ ಭೀಕರವಾಗಿರ್ಕ್ಕುಂ. ಲೋಕಭೀಕರಮಪ್ಪ ಇಂತಪ್ಪರೂಪಮಂ ನೀನಾನಲ್ ನಿಮಿತ್ತಮೇಂ?

ಪರಮೇಶ್ವರಂ.- ಎಲೆ ಸುದತೀಜನಶಿರೋಮಣಿ! ಕೇಳ್ — ಜಗದೊಳ್ ತಣ್ಪೆಂದುಂ ಬಿಸುಪೆಂದುಂ ಇರ್ತೆರಮುಂಟು. ಅವರೊಳ್ ತಣ್ಪು ಸೌಮ್ಯಂ, ಬಿಸುಪು ಆಗ್ನೇಯಮೆನಿಕುಂ. ಸೌಮ್ಯಮೆನಿಪ

ತಣ್ಪು ನಾರಾಯಣನದು. ಆಗ್ನೇಯಮೆನಿಪ ಬಿಸುಪೆನ್ನದು. ಚರಾಚರಾತ್ಮಕಂ ಈ ಪ್ರಪಂಚವೆಲ್ಲಮುಂ ಸ್ವಭಾವದಿಂ ತಣ್ಪುವಿಸುಪನೊಂದಿರ್ಕುಂ. ಅದರೊಳಂ ಬಿಸುಪಿಲ್ಲದೆ ಜಗಂ ಬಟ್ಟಣಮುಂ ಜೀವಿಸಲಾಗದು. ಎಲ್ಲಾ ಪ್ರಾಣಿಗಳ್ಗಂ ಅತ್ಯಾವಶ್ಯಕವೂದ ಬಿಸುಪು ಎನ್ನೊಳಿರ್ಪುದರಿಂ ಆಂ ಇಂತಪ್ಪ ಘೋರಾಕಾರದಿಂ ರಾಜಿಪೆಂ. ರೌದ್ರಾಕಾರವಾದೆನ್ನರೂಪು ಆಗ್ನೇಯಮೆನಿಸಿ ಲೋಕಕ್ಕೆ ಹಿತಕರಮೆನಿಸಿರ್ಕುಗುಂ. ಆಂ ಇಂತಪ್ಪ ರೌದ್ರರೂಪಮಂ ಉಳಿದು ಸೌಮ್ಯರೂಪಮಂ ತಾಳ್ದೊಡೆ ಮೂಲೋಕಮುಂ ಬರಿಯತಣ್ಪಿನಿಂ ಕಿಡುಗುಂ.

ಪಾರ್ವತಿ.-ಎಲೆ ದೇವದೇವನೆ! ನೀಂ ಅಂತು ರೌದ್ರರೂಪನಾಗಿದ್ದೊಡಂ ಭಕ್ತಜನದೊಳ್ ಸೌಮ್ಯನಾಗಿಯೆ ಇರ್ದಪೆ.

ನಿನ್ನ ನೆತ್ತಿಯೊಳ್ ಬೆಳ್ವೆಳಗಿಂ ತೊಳತೊಳಗುವ ಚಂದಿರರೇಖೆ ರಂಜಿಕುಂ ಗಡ. ಇದರ್ಕೇಂ ಕಾರಣಂ?

ಪರಮೇಶ್ವರಂ.--ಎಲೆ ಕಲ್ಯಾಣಿ! ಮುನ್ನಾಂ ಮೂಮುಸಕಂಗೊಂಡು ಭೂತಗಣಪರಿವೃತನಾಗಿ ದಕ್ಷಯಜ್ಞಮಂ ಭಂಜಿಪಂದು ಆ ಯಜ್ಞದೊಳ್ *ಬೇಳ್ದುದಂ* ಕೈಕೊಳಲ್ ಬಂದು ನೆರೆದ ಅಮರ್ದುಣಿಗಳೆಲ್ಲರುಂ ಆಗ್ರಹವ್ಯಗ್ರನಾದ ಎನ್ನತ್ತಣಿಂ ಬೆದರಿ ಭ್ರಾಂತಿಗೊಂಡು ಪಲಾಯನಂಗೆಯ್ಯುತಿರೆ ಅವರೊಳ್ ಪಿರಿದುಂ ಉಪಶಾಂತನಾದ ಚಂದಿರನಂ ಕಂಡೆನಗೆ ಅವನ ವಿಷಯದೊಳ್ ಅನುತಾಪಂ ಪೆರ್ಚೆ ಸಿರದೊಳಾತನಂ ತಾಳ್ದೆಂ. ಅಂದಿನಿಂದೆನ್ನ ನೆತ್ತಿಯೊಳ್ ಚಂದಿರರೇಖೆ ರಂಜಿಕುಂ.

ಪಾರ್ವತಿ-ಎಲೆ ವಲ್ಲಭನೆ! ಅದರಿನಲ್ತೆ ಸಂತಪ್ತರಾದ ಭಕ್ತರ ಚಂದ್ರಶೇಖರನಾದ ನಿನ್ನಂ ಅರ್ತಿಯಿಂ ಸೇವಿಸುತಿರ್ದಪರ. ಇದನೆಲ್ಲಂ ಬೆಸಗೊಂಡಾಲಿಸಿದುದಾಯ್ತು. ಆದೊಡಂ ಪೆರತೊಂದು ಬೆಸಗೊಳ್ವುದಿರ್ಕುಂ.

ಪರಮೇಶ್ವರಂ.-ದೇವಿ! ಸಂಕೋಚವೇಕೆ? ನಾಡೆ ಬೆಸಗೊಳ್.

ಪಾರ್ವತಿ-ದೇವದೇವನೆ! ಕಾರ್ಯಸಿದ್ಧಿಗೆ ಕಾರಣಮಾವುದು?

---

ಬೇಳ್ದುದಂ-ಹೋಮಮಾಡಿದುದನ್ನು;

ಕೆಲರ್ ದೈವಯತ್ನವೆಂಬರ್.. ಕೆಲರ್ ಪುರುಷಯತ್ನವೆಂಬರ್. ಅರೆಬರ್ ಅವೆರಡುಮೆಂಬರ್. ಇಂತು ಬೇರೆವೇರೆ ಮತಂಗಳಪ್ಪುದರಿಂ ಎನ್ನ ಮನಕೆ ಸಂದೆಗಮುಂಟು. ಇದಿಂತೆಂಬುದಂ ಎನಗೆ ಬೆಸಸು.

ಪರಮೇಶ್ವರಂ-ದೇವಿ ! ಸಮುಚಿತಮಪ್ಪುದನೆ ಬೆಸಗೊಂಡೈ, ಆಲಿಸು. ಜಗದೊಳೆಲ್ಲವರ್ಕ್ಕಂ ಪುರುಷಪ್ರಯತ್ನವೆಂದುಂ ದೈವಯತ್ನವೆಂದುಂ ಎರಡುಂ ಕಾರಣಂಗಳುಂಟು. ಅವರೊಳ್ ಪಿಂದಣ ಕರ್ಮದ ಪರಿಪಾಕವೆ ದೈವಯತ್ನವೆನಿಪುದು. ಇದರ್ಕ್ಕೆ ಅದೃಷ್ಟವೆಂದುಂ ಪೆಸರ್. ಇದು $ಮಾಯೆದಾವಿನಿಂ$ ಬಿಗಿವಡೆದ ಮಾನಿಸರ್ಗ್ಗರಿಯಲರಿದು. ಪುರುಷಂ ಮಾಳ್ಪ ಪ್ರಯತ್ನವೆ ಪುರುಷಪ್ರಯತ್ನವೆನಿಪುದು. ಇದು ಪ್ರತ್ಯಕ್ಷವಾದುದು. ಪುರುಷಪ್ರಯತ್ನದಿಂ ಕ್ರಿಯಾಮಾತ್ರಮುಂ ದೈವಯತ್ನದಿಂ ಫಲಮುಂ ಅಕ್ಕುಂ. ಎಂತೆನೆ- ಬೇಸಾಯಗಾರಂ ನೆಲನಂ ಉಳ್ತು ಬಿಳ್ತುಂ ಬಿತ್ತಿ ಬೆಳೆಯಿಸಿ ಮಹಾಪ್ರಯತ್ನದಿಂ ಸಸ್ಯಮಂ ಓವುವಂ. ಅವಂಗೆ ಪುರಾಕೃತಕರ್ಮಫಲಂ ಪ್ರತಿಕೂಲವಾಗಿರ್ದ್ದೊಡೆ ಫಲಂ ಕೈಸೇರದು. ಅನುಕೂಲವಾಗಿರ್ದೊಡೆ ಕೈಸೇಗ್ಗುಂ.

ಪುರುಷಪ್ರಯತ್ನಮಾವಶ್ಯಕವಾದುದೆಂತೆನೆ.-ಪುರುಷಂ ವಿವೇಕದಿಂ ಸತ್ಕರ್ಮಮಂ ಆಚರಿಪೊಡೆ ಸತ್ಕೀರ್ತಿ ಬರ್ಕ್ಕುಂ. ಅವಿವೇಕದಿಂ ದುಷ್ಕರ್ಮಮಂ ಆಚರಿಪೊಡೆ ದುಷ್ಕೀರ್ತಿ ಬರ್ಕ್ಕುಂ. ಪುರುಷಂ ಮೊದಲ್ ಕಾರ್ಯಸಿದ್ಧಿಗೆ ಸಾಲ್ವನಿತು ಪ್ರಯತ್ನಮಂ ಗೆಯುವೇಳ್ಕುಂ. ಅದರಿನೆ ಕಜ್ಜಂ ಪಣ್ಗುಂ. ಒರ್ಮೆ ಪಣ್ಣದೆ ಪೋದೊಡೆ ಜಸಮಾದೊಡ ಮೊದವುಗುಂ. ಪ್ರಯತ್ನಿಸಿ ಬಾವಿಯುಂ ತೆಗೆದೊಡೆ ಸಲಿಲಂಬಪ್ಪುದುಂ ಅರಣಿಯುಂ ಮಥಿಸಿದೊಡೆ ಅಗ್ನಿಪುಟ್ಟುವುದುಂ ಪ್ರತ್ಯಕ್ಷಸಿದ್ಧಂ. ಅಂತಾದೊಡಂ ದೈವಸಾಹಾಯ್ಯವಿಲ್ಲದೊಡೆ ಎನಿತು ಯತನಮಂ ಗೆಯ್ದೊಡೇನೋ ? ಅದರಿಂ ದೈವಪುರುಷಯತ್ನಂಗಳನೆರಡರಿಂ ಕಜ್ಜಂ ಪಣ್ತುಪುದು. ಇವರೊಳ್ ಒಂದಿಲ್ಲದೊಡಂ ಕಾರ್ಯಸಿದ್ಧಿಯಾಗದು. ಶೀತೋ

---

ಮಾಯೆದಾವು—ಮಾಯಾಪಾಶ

ಆಃ ತಿಳಿದೆಂ ತಿಳಿದೆಂ. ಎಲೆ ಮಾರಿಸಿಗಳಿರ ! ನೀವೆಲ್ಲರುಂ ಚಿಂತೆಗೊಳ್ಳದೆ ನಿಮ್ಮೆಡೆಯುಂ ಸೇರ್ವುದು. ಆಂ ಈಗಳೆ ಆನರನ ತಪಮಂ ನಿಲಿಪೆಂ.

ರಿಸಿಗಳ್.-ಅಂತಾದೊಡೆ ಆಂ ಧನ್ಯರಾದೆವು.

ವೃ|| ಜಯಜಯ ಜಗದೀಶ ಶಿವಂಕರ ಭೋ |
ಜಯಜಯ ಗೌರೀವಲ್ಲಭ ಶಂಭೋ ||
ಜಯಜಯ ಕಿಂಕರಸಂಕಟಹರ ಭೋ |
ಜಯಜಯ ಶಂಕರ ಕೈಲಾಸವಿಭೋ || ೧೫೩ ||

(ಎಂದು ತೆರಳ್ವರ್)

ಪಾರ್ವತಿ.-ಎಲೆ ಜಗದ್ವಲ್ಲಭನೆ ! ಆ ತವಸಿಯಾರ್ ?

ಪರಮೇಶ್ವರಂ -

ಕಂ|| ಪನ್ನಗವರವೇಣಿಯೆ ಕೇಳ್ |
ಸನ್ನುತಗುಣಶಾಲಿ ಪಾರ್ಥನಿಂದಿರನಣುಗಂ ||
ಎನ್ನಯೆ ಪರಮಾಸ್ತ್ರಕೆ ತಾ |
ನುನ್ನತತರನಿಯಮದಿಂದೆ ತಪಮಾನೆಸಪಂ || ೧೫೪ ||

ಪಾರ್ವತಿ.- ಅಂತಾದೊಡೆ ಆತಂಗೆ ಬಸೆದು ಬೇಡಿದುದಂ ನೀಡವೇಳ್ಕುಂ.

ಪರಮೇಶ್ವರಂ.-ಅದರ್ಕೇಂ ತಡೆಯೇಂ ? ಇಲ್ಲದೊಡೆ ಭಕ್ತವತ್ಸಳನೆಂಬ ಅರಿಕೆಯ ಬಿರುದೆನಗೆ ನಿಲ್ವುದೇ ? ಆದೊಡೆ ಎನ್ನ ಆ ಅಸ್ತ್ರಮಂ ಸಾಮಾನ್ಯಪುರುಷಂಗೆ ಈವುದಲ್ತು. ಅದರಿಂ ಆತನ ಅದಟು ಎಂತಪ್ಪುದೋ ನಾಡೆ ಪರಿಕಿಸವೇಳ್ಕುಂ. ಅದರ್ಕೇನುಪಾಯಮಂ ಗೆಯ್ವಂ ? (ಎಂದಿನಿತು ಚಿಂತಿಸಿ) ಆಃ ! ದಲ್ ಇದುವೆ ತಕ್ಕುದು. (ನಂದಿಯಂ ನೋಡಿ) ಎಲೆ ನಂದಿ ! ಇತ್ತ ಬಾರ.

ನಂದಿ.-(ಸನ್ನಿಧಿಗೆಯ್ದಿ) ಅಖಿಲಾಂಡಕೋಟಿನಾಯಕನೆ ! ಬೆಸಸುವುದು.

ಪರಮೇಶ್ವರಂ-ನಂದಿ! ಈಗಳ್ ಎಮ್ಮ ಪ್ರಮಥಗಣವೆಲ್ಲಮುಂ ತಕ್ಕಂತೆ ಬೇಡರ ವೇಸಮುಂ ಕೈಕೊಂಡು ಎನ್ನೊಡವರಲ್ ಪೊರವಡೆ ಯೊಳ್ ಸನ್ನಣಂಗೊಂಡಿರ್ಕೆ. ಆನುಂ ತಕ್ಕ $ ಬಿಯದವೇಸಮುಂ $ ಕೊಳ್ವೆಂ.

ನಂದಿ.-ಆಣತಿ (ಎಂದು ತೆರಳ್ವಂ)

ಪರಮೇಶ್ವರಂ - (ಪಾರ್ವತಿಯಂ ನೋಡಿ) ದೇವಿ! ನೀನುಂ ಬೇಡಿತಿ ಯಾಗು.

ಪಾರ್ವತಿ-ಪ್ರಾಣವಲ್ಲಭನೆ! ನೀಂ ಬೇಡನಾದಿಂ ಬಳಯುಂ ಆಂ ಬೇಡಿತಿಯಾಗದಿರ್ದೊಡೆ ಅಕ್ಕುಮೇ?

ಪರಮೇಶ್ವರಂ-ಪ್ರಿಯೆ! ಎನ್ನೀಯದೊಂದು ಲೀಲೆಯಿಂ ಮೂಜ ಗವೆಲ್ಲಮುಂ ಸಂತಸಂಬಡುಗೆ.

ಪಾರ್ವತಿ-ಜಗದ್ವಲ್ಲಭನೆ! ಶಿವಲೀಲೆಗೆ ಸಂತಸಂಬಡದರಾರೊ! ಅದಿರ್ಕೆ. ಅರ್ಜುನಂಗೆ ವರವೀವುದರ್ಕ್ಕಂ ಈ ಕವಡುಬಿಯದ ವೇಸಕ್ಕಂ $ ಬಿಸುಗೆಯಾವುದು? $ ನೀಂ ಅದೇಂ ಗೆಯ್ವುದೆಂದು ಆಳೋಚಿಸಿರ್ಪೆ?

ಪರಮೇಶ್ವರಂ.-ಗೆಯ್ವುವನೀಗಳ್ ತೋರಿದಪೆಂ. ಚೆಚ್ಚರಂ ಸನ್ನ ಣಂಗೊಳ್.

ಪಾರ್ವತಿ.-ಎಲೆ ಬೇಡರಾಣ್ಮನೆ! ಆಗಳ್ ಕೈಯೊಳ್ ಬಿಲ್ಲುಮಂ ಪಿಡಿದಯ್.

ಪರಮೇಶ್ವರಂ.-ಆಟಕ್ಕೆ ತಕ್ಕವೇಸಂ ವೇಸಕ್ಕೆ ತಕ್ಕಬಾಸೆಯಿರ ವೇಳ್ಕುಂ ಗಡ?

(ತೆರೆಯುಲ್ಲಿ ಕಲಕಲಂ)

ಪಾರ್ವತಿ -(ಕೇಳ್ದು) ಇದೇಂ ಮಹಾಕಲಕಲಂ?

---

ಬಿಯದ-ವ್ಯಾಧ. ಬಿಸುಗೆ-ಸಂಬಂಧ.

ಪರಮೇಶ್ವರಂ-(ಆಲಿಸಿ) ಎಮ್ಮ ಪರಿಜನದ ಸಂರಂಭಕೋಲಾಹಲಂ. ಇನ್ನೇಕೆ ತಳ್ವುದು ? (ಎಂದು ಬಹುಮಂದಪರಿಜನದೊಡನೆ ಕಿರಿದುದೂರಂ ಸಂಚರಿಸಿ) ಅರಸಿ ! ಇತ್ತ ನೋಡು. ಎತ್ತಂ ಮರಗಿಡುಗಳ್ ಅರ್ಜುನನ ತಪೋಜ್ವಾಲೆಯಿಂ ಸೀದು ಸೀಕರಿವೋಗಿರ್ಪುವಂ.

ಪಾರ್ವತಿ-ಇದೆಲ್ಲಂ ತಪೋಜ್ವಾಲೆಯಿಂ ಬೆಂದುದೆಂದು ಅದೆಂತು ಬಗೆವೈ ? ಕಾಳ್ಕಿಚ್ಚು ಉರಿಪಿದುದೆಂದು ಬಗೆಯಲಾಗದೆ ?

ಪರಮೇಶ್ವರಂ-ದೇವಿ ! ನೀಂ ಅಂತು ಬಗೆವೊಡೆ ಇತ್ತ ನೋಡು ಪಕ್ಕದೊಳಿರ್ಪ ಗುಣ್ಪಿನ ಜಲಾಶಯಮಂ. ಇದರ ನೀರೆಲ್ಲವುಂ ಕುಳಕುಳನೆ ಕೊಳ್ಕುದಿಗುದಿಗುಂ. ಇದರ ನಡುವಣ ಮರಂಗಳುಂ ಸುಟ್ಟು ಕುರುಪಿಂಗೆ ಎಡೆಯಾಗಿರ್ಪುವಂ. ಕಾಳ್ಕಿಚ್ಚಿಂಗೆ ನೀರಂ ಬಳವೊಕ್ಕು ಸುಡುವ ಅದಟು ಎಲ್ಲಿಯದು ?

ಪಾರ್ವತಿ-ಅಂತಪ್ಪೊಡೆ ಇತ್ತಲ್ ಈ ನೆಲವೆಲ್ಲಮುಂ ಏಕೆ ತಣ್ಗದಿರಗಲ್ಲಂತೆ ತಣ್ಣಿತಾಗಿರ್ಪುವಂ ?

ಪರಮೇಶ್ವರಂ.-ಎಮ್ಮ ಈ ಪರಿವಾರಂ ಚುಚ್ಚುವಂನೆಲದೊಳ್ ಅಡಿಯಿಡಲಾಗದೆಂದು ಆಂ ಮರುಕಂಗೊಂಡು ಬಗೆದುದರಿಂ ಇಂತಾಯ್ತು.

ಪಾರ್ವತಿ-ಸರ್ವಶಕ್ತನಪ್ಪ ನೀಂ ಏನಂ ಬಗೆದೊಡೆ ಏನಾಗದು? ಆದೊಡೆ ಅರ್ಜುನಂ ಇತ್ತಲೆ ಗೆಂಟಿನೊಳ್ ತಪವಿರ್ಪನೆಂದರಿವೆಂ.

ಪರಮೇಶ್ವರಂ.-ಎನಗಂ ಅಂತು ತೋರುಗುಂ.

(ಆಗಸದಲ್ಲಿ)

ಎಲೆ ರಾಯರಿಸಿಯೆ ! ಅದೊಂದು ಕೂರೆಕ್ಕಲಂ ಕೋಳ್ಪಟ್ಟ ದಾಡೆಯುಂ ಮಸೆಮಸೆದು ಮೂಮುಸಕದಿನಿದಿರ್ಚುಗುಂ. ಅಸವಸದಿನಿದಂ ವಿಶಸನವೆಸಗುವುದು.

ಎಲೆ ರಿಸಿಗಳಿರಾ ! ಬೆದರದಿರಿಂ ಬೆದರದಿರಿಂ. ಇದೆಕೊಳ್ಳುಮಿಾಗಳ್ ಎಕ್ಕಲನೊಕ್ಕಲಿಕ್ಕುವೆಂ.

---

ಕೋಳ್ಪಟ್ಟ-ಕೋಡನ್ನು ಉಜ್ಜಿ

ಪರಮೇಶ್ವರಂ.—(ಕೇಳ್ದು) ಈವುಕ್ತಿಪ್ರತ್ಯುಕ್ತಿಯಾರ್ತು ? ಅಂತಪ್ಪಕೂರೆಕ್ಕಲನದಾವುದು ? (ಬಗೆದು) ಅಹಹ ! ಬಗೆದೆಂ ಬಗೆದೆಂ. ಮೂಕನೆಂಬ ರಕ್ಕಸಂ ಎಕ್ಕಲವರಿಜೆನಿಂ ಈ ಬನದೊಳ್ ಅಲೆಯುತುಂ ರಿಸಿಗಳಂ ಕೋಟಲೆಗೊಳಿಕುಂ. ಅಂತು ಕೋಟಲೆವಟ್ಟು ಬೆದರುತಿರ್ಪ ರಿಸಿಗಳ್ ಕದುಬಿನಿಂ ಕೂಗಿಕೊಳ್ವರ್. ಅವರಂ ಸನಿಹದೊಳಿರ್ಪನದಾವನೋ ರಾಯರಿಸಿ ಸಂತವಿಡುವಂ. ಆ ರಾಯರಿಸಿಯಾವಂ ? (ಚಿಂತೆಯುನಭಿನಯಿಸಿ) (ಆತ್ಮಗತಂ) ಮತ್ತಾವಂ ಆ ಅರ್ಜುನನೆ ದಲ್. (ಪ್ರಕಾಶಂ) ಆಃ ಇರ್ಕೆ. ಎನಗಿಂದು ತಕ್ಕ ಸನ್ನಿವೇಶಂ ದೊರೆತುದು. ಕಕ್ಕಸಂ ಎಕ್ಕಲವರಿಜೆನ ಮೂಕನೆಂಬಾರಕ್ಕಸಂ ಇಲ್ಲಿಗೆಂಟೆನೊಳ್ ಅಲೆದಪಂ. ಆಂ ಈಗಳ್ ಆ ರಕ್ಕಸನಂ ಎಚ್ಚಟ್ಟಿ ಕಣಯಿಂ ಎಚ್ಚುಕೊಲ್ವೆಂ. (ಎಂದು ಜೇವಡೆವನಿತರೊಳ್) (ತೆರೆಯುಲ್ಲಿ ಮತ್ತೆ)

ಕಂ|| ಸೂಕರ ನಿಲ್ ನಿಲ್ ಜಗಕತಿ ।
ಭೀಕರನಾಗಿರ್ಪ ನಿನ್ನ ನಿನ್ನುಳಿದಪೆನೇಂ ||
ಈಕರಗತಬಾಣದ ಗುರಿ ।
ಗಾಕರವಾಗಿದ್ದ ಮಾಸೆಯೋಂ ಜೀವಿತದೊಳ್ || ೧೫೫ ||

ಪರಮೇಶ್ವರಂ.—(ಕೇಳ್ದು) ಆಃ ! ಇದು ಆಗಳೆ ಆಯೆಕ್ಕಲನಂ ಕೊಲಲ್ ಸನ್ನಣಂಗೊಂಡು ಸನಿಹದೆ ಸರಲನಿಸುವ ರಾಯರಿಸಿಯು ಬಿರುನುಡಿಗಡ ! ಆಂ ಇಂತಿರ್ಪುದು ತಗದು. (ಮೇಲೆ ನೋಡಿ)

ಕಂ|| ಎಕ್ಕಲವರಿಜೆನ ಕಕ್ಕಸ ।
ರಕ್ಕಸ ನಿನ್ನಾಯುವಿಂದು ತೀರ್ದುದೆನಿಕ್ಕುಂ ||
ಚೆಕ್ಕನೆ ಸರಲಿಸುತಕ್ಕಟ ।
ನಿಕ್ಕುವಮಾನೊಕ್ಕಲಿಕ್ಕುವೇ ನಿಟ್ಟಣದೊಳ್ || ೧೫೬ ||

ಇದೆ ಸರಲನೆಚ್ಚೆಂ. (ಎಂದು ಮುಂದೆ ನಾಲ್ಕೈದು ಪಜ್ಜೆಗಳನಿಟ್ಟು ಸರಲನೆಚ್ಚಪಂ)

(ತೆರೆಯುಲ್ಲಿ ' ಹಾ ' ಎಂದು ದನಿಯುಕ್ಕುಂ)

ಪರಮೇಶ್ವರಂ —(ಕೇಳ್ದು) ಇದೆಕೊಳ್ ಒಂದೇಸರಲ ಇಸುಗೆಯಿಂ ಛಟ್ಟನೆ ನೆಲಕುರುಳ್ದ ರಕ್ಕಸನ ಆರ್ತಧ್ವನಿಯಿದು. (ನೋಡಿ) ಅರರೆ! ಇಲ್ಲಿಯೆ ಮುಂದೆಡೆ ರಕ್ಕಸಂ ನಿಶ್ಚೇಷ್ಟಿತನಾಗಿ ಬೆಟ್ಟದಂತೆ ಬಿಳ್ದಿರ್ಪಂ. (ಸ್ವಲ್ಪದೂರಂ ನಡೆದು) ಇದೆಕೊಳ್ ಕಟ್ಟಿದಿರೊಳ್ ಬಿಲ್ವಿಡಿದು ನಿಂದಿರ್ಪ್ಪ ಆವನೋ ತಪಸಿ ಕಣ್ಗೆ ಕಾಣ್ಬಂ. ಒಳ್ಳಿತು ಈತನೆಡೆಗೆ ಪೋಗಿ ಮಾತನಾಡಿಪೆಂ. (ಎಂದು ಮುಂದೆ ತೆರಳ್ವಂ)

(ಬಳಿಕೆ ತಪವಿರ್ಪ ಧನುರ್ಧಾರಿಯಾದರ್ಜುನಂ ಪುಗುವಂ)

ಅರ್ಜುನಂ —(ಮುಂದೆ ನೋಡಿ) ಅದಾವನೀಕಿರಾತಂ ಇತ್ತಲಿದಿರೊಳ್ ಸಪರಿವಾರನಾಗಿ ಬರುತಿರ್ದಪಂ ?

(ಬಳಿಕೆ ಕಿರಾತವೇಷಧಾರಿಯಾದ ಪರಮೇಶ್ವರಂ ಸಪರಿವಾರನಾಗಿ ಪುಗುವಂ)

ಅರ್ಜುನಂ.— (ಪರಮೇಶ್ವರನಂ ನೋಡಿ) ಎಲೆ ! ನೀನಾರ್ ? ಗಹನಮಪ್ಪೀಗಿರಿಗಹನದೊಳ್ ಇನಿತುಮಳ್ಕದೆ ಅಲೆವೈ ?

ಪರಮೇಶ್ವರಂ — (ನಕ್ಕು) ಆವಾರೇ ? *ಬೀಯದಬಲ್ಪಿನಬಿಯದರ. ಎಮ್ಮ ವೇಸಮಂ ನೋಡೆ ತಿಳಿಯದೇ ? ನಿಚ್ಚಮುಂ ಇಲ್ಲಿಯೆ ಅಲೆವೆಮಗೆ ಅಳ್ಕೆಂದೊಡೇಂ ? ನೀನಾದೊಡೆ ಬಂದೆರಳ್ದಿನಂಗಳಿಂ ಬಂದು ನಿಂದಿರ್ಪೆ. ಆಂ ಗಡ ಪುಟ್ಟಿದಾದಿನಿಂ ಇಲ್ಲಿ ನೆಲಸಿ ನಿಂದಿರ್ದ್ದಪೆವು. ಏನುಮನರಿಯದ ಕಾಲುರಿಚಂ ನೀಂ ಶೂನ್ಯಶೂನ್ಯವಪ್ಪ ಈಯಡವಿಯೊಳ್ ಬೆರ್ಚ್ಚಿ ಬೆದರದೆ ಎಂತೊರ್ವನ ಇರ್ಪೆಯೊ ! ಅಕಟಕಟ ! !

ಅರ್ಜುನಂ —ನಿನ್ನ ಮಾಟದ ಮರುಕದ ನುಡಿಗಳಂತಿರ್ಕ್ಕೆ. ಲೋಕೋತ್ತರಂ ಈ ಬಿಲ್ಗಣೆಗಳೆನಗೆ ನೆರವಾಗಿರೆ ಆನೇಕೆ ಬೆರ್ಚ್ಚಿ ಬೆದರುವುದು ? ವಿಜನವಪ್ಪ ಈಯೆಡೆ ಎನ್ನ ತಪಕ್ಕೆ ತಕ್ಕುದೆಂದು ಆನಿತ್ತರ್ ಅಂದಿನಿಂ ನೆಲಸಿ ನಿಂದಿರ್ಪ್ಪೆಂ. *ಇಂದುಲುಬ್ಧಂ* ನೀಂ ಗಣಂಬೆರಸು ಅದೆತ್ತಣಿಸೆಯ್ದಿದೆ ?

---

*ಬೀಯದ-ನಾಶವಂಪಡೆಯದ, ಇಂದು-ಈದಿನ, ಲುಬ್ಧಂ-ಬೇಡನು ಮತ್ತು ಇಂದುಲುಬ್ಧಂ-ಚಂದ್ರನಲ್ಲಿ ಆಸೆಯುಳ್ಳವನು; (ಎಂದು ಎರಡರ್ಥ)

ಪರಮೇಶ್ವರಂ. ಆಂ ಇಂದುಲುಬ್ಧನಾದುದರಿನೆ ನಿನ್ನೆಡೆಗೆಬಂದುದು.

ಅರ್ಜುನಂ-ಲುಬ್ಧನಾದ ನಿನಗೆ ಎನ್ನೆಡೆಯೊಳ್ ಏಂಗೆಯ್ತಪ್ಪಂ ?

ಪರಮೇಶ್ವರಂ.-ಇಂದುಲುಬ್ಧನೆಂದರಿಯೆನ್ನಂ.

ಅರ್ಜುನಂ.-ಎಂದುಂ ಲುಬ್ಧನಲ್ತೆ ನೀಂ ?

ಪರಮೇಶ್ವರಂ.-ಅರಿಯದ ನಿನ್ನೊಡನೇವಾತು ? ಅದಿರ್ಕೆ. ಈ ಯೆಡೆಗೆ ಬರಲಾಂ ತಕ್ಕನಲ್ತೇ ?

ಅರ್ಜುನಂ-ಇಂತಪ್ಪ ತಪೋಭೂಮಿಗೆ ಅರುಗುಲಿ ನೀಂ ಬರ್ಪುದಲ್ತು.

ಪರಮೇಶ್ವರಂ.-ಆದೊಡೀಭೂಮಿ ನಿನ್ನ ತಾತನದೋ ?

ಅರ್ಜುನಂ-ಅಪ್ಪುದು. ಎನ್ನತಾತನದೇ ಇದೆಲ್ಲಂ.

ಪರಮೇಶ್ವರಂ-ಅದಾವಂ ನಿನ್ನ ತಾತಂ ?

ಅರ್ಜುನಂ-ಅದಾವನೆಂದೊಡೆ ಪಾರ್ವತೀಪತಿಪರಮೇಶ್ವರಂ.

ಪರಮೇಶ್ವರಂ.-ಅವಂ ಬೆನಕಂಗಂ ಅರುಮೊಗಂಗಂ ತಾತಂ. ನಿನಗೆಂತು ತಾತಂ ?

ಅರ್ಜುನಂ-ಅವಂ ಜಗಕ್ಕೇ ತಾತಂ.

ಪರಮೇಶ್ವರಂ.-ಜಗಕ್ಕೇ ತಾತನೆಂದೆನಿಪವಂ ಎನಗೆ ತಾತನಾಗನೊ? ನಿನಗೆನಿತು ನಂಟು ಎನಗಮನಿತುಂಟು.

ಅರ್ಜುನಂ.- ಅಜ್ಞಾತಪ್ರವರಗೋತ್ರನೆ ! ಇನ್ನೆನ್ನೊಡನೆ ನೀಂ $ ಆದಂ ನುಡಿಯಬೇಡ.

ಪರಮೇಶ್ವರಂ-ದಲ್. ಎನ್ನಪ್ರವರಗೋತ್ರಮನಾರರಿವರ್ ?

ಅರ್ಜುನಂ.-ನಿನಗಂತಪ್ಪ ಪ್ರವರಂ ಗೋತ್ರವಿರ್ದೊಡಲ್ತೆ ಆರಾನುಮರಿವರ್ ?

ಪರಮೇಶ್ವರಂ.-ಆದೊಡೆನಗೆ ಪ್ರವರಗೋತ್ರಮೆ ಇಲ್ಲಮೇ ?

---

ಅರುಮೊಗಂಗಂ-ಷಣ್ಮುಖನಿಗೂ, ಆದಂ-ಅಧಿಕವಾಗಿ, ನುಡಿಯಬೇಡ. ಮಾತನಾಡಬೇಡ ಎಂತಪ್ಪ ಬೇಡ-ಬೇಡನೆ ನುಡಿಯಂ-ಮಾತನಾಡು ಎಂದು ಎರಡರ್ಥ

ಅರ್ಜುನಂ.— * ವಿಜಾತಿಯೂದ * ನಿನಗಾವುದು ಗೋತ್ರಪ್ರವರಂ?

ಪರಮೇಶ್ವರಂ —ಆಃ ! ನಿನ್ನ ಈ ಮಾತಂ ಪಂಡಿತರಾಲಿಸಿದೊಡೆ ಮೆಚ್ಚುವರ್.

ಅರ್ಜುನಂ —ಮೆಚ್ಚದೊಡೆ ಪೋಕೆ. ನೀಂ ಎನ್ನೊಡನೆ 'ನುಡಿಯು ಬೇಡ' ಎಂದೊಡಂ ನೀನೇಕೆ ನುಡಿವೆ ?

ಪರಮೇಶ್ವರಂ —"ಎನ್ನೊಡನೆ ನುಡಿಯುಬೇಡ" ಎಂಬ ನಿನ್ನ ನುಡಿಗೆ "ಬೇಡನೆ ! ಎನ್ನೊಡನೆ ನುಡಿಯು" ಎಂಬರ್ಥವಲ್ತೆ.

ಅರ್ಜುನಂ.—ಎಲೆ ಗಾವಿಲನೆ ! ನಿನ್ನ *ಸರ್ವಜ್ಞತೆಯಂ ಎನ್ನೊಳ್ ತೋರಿಪಯ್.

ಪರಮೇಶ್ವರಂ —ಅಪ್ಪುದು. ನಿನ್ನೊಳ್ ಇಂದು ಎನ್ನ ಸಾರ್ವಜ್ಞ್ಯಮಂ ತೋರವೇಳ್ಕುಮೆಂದು ಬಂದಿರ್ದಪೆಂ.

ಅರ್ಜುನಂ —ಪೆರತೇಂ ? ಅರ್ಥಮನಾವುದನೋ ಕೈಕೊಳ್ವೆ.

ಪರಮೇಶ್ವರಂ — ಸಲ್ಲದ ಪರಾರ್ಥಮನೇಕೆ ಕೈಕೊಳ್ವುದು ? ನಿಜವಾದರ್ಥಮನೆ ಕೈಕೊಂಡೆಂ.

ಅರ್ಜುನಂ —ಈ ನುಡಿಯೊಳಂ ಅದೊಂದು ಜಾಣಂ ತೋರಿಪೆ.

ಪರಮೇಶ್ವರಂ —ಗಾವಿಲಂಗೆನಗೆ ಜಾಣಾವುದು ?

ಅರ್ಜುನಂ.- ಇರ್ಕೆ ಪೋ. ನಿನ್ನೊಡನೆ ತಕ್ಕಂತೆ ನುಡಿವನಿತು ಅರಿವೆನಗಿಲ್ಲಂ.

ಪರಮೇಶ್ವರಂ.-ನಿನಗಂತಪ್ಪ ಅರಿವಿಲ್ಲವೆಂಬುದು ನನ್ನಿ. ಅಂತು ಅರಿವಿರ್ದೊಡೆ ನಿನ್ನ ಪರಿಯೇ ಬೇರೆಯಿರ್ಕುಂ.

ಅರ್ಜುನಂ.-* ಆಖೇಟ್ಯೈಕಶರಣಂ * ಎನಿಪ ನಿನ್ನೊಡನೆ ತವಸಿಗೆನಗೇವಾತೊ ? ನೀನಿಲ್ಲಿ ನಿಲ್ಲದೆ ತೊಲಗು.

ಪರಮೇಶ್ವರಂ — ಎನ್ನಂ ಆಖೇಟ್ಯೈಕಶರಣನೆಂದೊಡಂ ಎನಗೆ ಸಲ್ವುದು.

---

ವಿಜಾತಿ_ಜನ್ಮವಿಲ್ಲದವನು ಮತ್ತು ಲೋಕವಿಲಕ್ಷಣನು. ಸರ್ವಜ್ಞ—ಎಲ್ಲವನ್ನು ತಿಳಿದವನು, ಮತ್ತು ಈಶ್ವರ. ಆಖೇಟ್ಯೈಕಶರಣಂ—ಬೇಟೆಗೆಮುಖ್ಯಾಶ್ರಯನು ಮತ್ತು ಆದೇವತೆಗಳ ಮುಖ್ಯರಕ್ಷಕನು.

ಅರ್ಜುನಂ.-ಸಲ್ವುದೇಂ? $ನಿರ್ಘೃಣನೆನಿಪ$ ನಿನ್ನ ಸಕವೆ ಅದು.

ಪರಮೇಶ್ವರಂ_ಅಪ್ಪುದು ಆಂ ಆವಿಷಯದೊಳ್ ನಿರ್ಘೃಣನೇಸರಿ. ಅದೆಲ್ಲಮಂತಿರ್ಕೆ. ಮೊದಲ್ ಆಂ ಗುರಿಯಿಟ್ಟೀಯೆಕ್ಕಲನಂ ನೀನೆಂತು ಸರಲಿನೆಚ್ಚೆ?

ಅರ್ಜುನಂ-ಈಯೆಕ್ಕಲನಂ ಆನೆ ಮೊತ್ತಮೊದಲ್ ಕಂಡು ಗುರಿಯಿಟ್ಟೆಂ.

ಪರಮೇಶ್ವರಂ -ಎಲೆ ನರನೆ! ಏಕೆ ನಿರ್ನೆರಂ ಪುಸಿವಯ್? ಆಂ ಬಹುದೂರದಿಂ ಅರೆಯುಟ್ಟಿಕೊಂಡು ಬಂದು ಇಲ್ಲಿ ಕಣೆಯಿಂ ಎಚ್ಚೆಂ. ಆಂ ಮೊದಲೆ ಗುರಿಯಿಟ್ಟದ್ದರಿಂ, ಎನ್ನ ಸರಲಿಸುಗೆಯಿನೆ ಕೆಡೆದುದೀ ಯೆಕ್ಕಲಂ.

ಅರ್ಜುನಂ.-ಎಲೆ ದುರುದುಂಬಿಯೆ! ಬಿಯದನೆನಿಸಿದ ನೀಂ ಪುಸಿವುದು ಸಹಜಂ. ಅಗರಿನೆ ಮನ್ನಣೆದಪ್ಪಿ ಮಾತನಾಡುವೆ.

ಪರಮೇಶ್ವರಂ.-ಎಲೆ ಮರುಳ! ಬಳಿಯೊಳ್ ಬಿಯದನೆನಿಸಿದ ಮಾತ್ರದಿ ನೆನ್ನ ಮನ್ನಣೆಗೆ ಬಂದಕೊರತೆಯೇಂ? ಕೇಳ್ –

ಕಂ॥ ಅಸದನ್ವಯದೊಳ್ ಸಂಜನಿ।
ಯಿಸಿದೊಡಮತಿಶಯದೆ ಮಾನ್ಯರೆನಿಪರ್ ಸುಜನರ್॥
ಕೆಸರೊಳ್ ಪುಟ್ಟಿದ ತಾವರೆ।
ವಸುಧೆಯೊಳಖಿಳಾಭಿನಂದ್ಯಮೆನೆ ಶೋಭಿಸದೇ ॥ ೧೫೮ ॥

ಅರ್ಜುನಂ -ಎಲೆ ಉಗ್ರನೆ! ಕೈಯೊಳ್ ಶೂಲಮಂ ಪಿಡಿದ ನಿನ್ನ ಸೌಜನ್ಯಂ ಏನಿರಿದೊ? ಜಗದೊಳ್ ನಿನ್ನ ಮನ್ನಣೆಯೇಂ ಘನತರಮೋ? ತಾವರೆಯ ದೃಷ್ಟಾಂತಂ ನಿನಗೇಕೆ?

ಪರಮೇಶ್ವರಂ.-ನೀಂ ಎನ್ನಂ $ಉಗ್ರನೆಂದುಂ ಶೂಲಿಯೆಂದುಂ$ ಪೇಳ್ವುದು ಎಂದಿಂಗಂ ಎನ್ನ ಸ್ವರೂಪಕೆ ಹಾನಿಕರವಲ್ತು, ತಿಳಿ.

ನಿರ್ಘೃಣಂ– ದಯೆಯಿಲ್ಲದವನು ಮತ್ತು ಜುಗುಪ್ಸೆಯಿಲ್ಲದವನು. ಉಗ್ರಂ-ಕ್ರೂರನು, ಮತ್ತು ಈಶ್ವರ, ಶೂಲಿ-ಶೂಲವುಳ್ಳವನು ಮತ್ತು ಈಶ್ವರ

ನಗರೇ? ಬಳಕೊಂಡಿರ್ಪಸಾತ್ತ್ವಿಕಭಾವಂ ಇರದೆ ತಾನದೆಂತಾನುಂ ಪೊರಪೊಣ್ಮುಗುಂ.

ಅರ್ಜುನಂ.— ಎಲೆ ಕಾಲುರಿಚನೆ! ನಿನ್ನ ಬರ್ದಿನ ಯುಕುತಿಯ ನುಡಿಗಳ ನತ್ತಲಿಡು. ಪೆರರಂ ಮುಚ್ಚಿಸಲ್ ಪೊರಗೆ ದಾಂಭಿಕವೇಷಂಗಳಂ ಕೈಕೊಂಡೊಡೆ ಬಗೆಯೊಳಂ ನಿಮ್ಮಳವಾಗಿರ್ಪುದೇ? ಕಲ್ ಪೊರಗೆ ನುಣ್ಣಿತಾದೊಡೇಂ? ಒಳಗಣಕಾಠಿನ್ಯಂ ಪಿಂಗುವುದೇ? ಕವಡಿನ ಪೊರಗಣವೇಷಾಚಾರಂಗಳನೇಂ ತೆಗೆತೆಗೆ.

ಪರಮೇಶ್ವರಂ.— ಆದೊಡೆ ನಿನ್ನ ಬಗೆ ನಾಡೆ ನಿಮ್ಮಳವಾಗಿರ್ದಪುದೋ?

ಅರ್ಜುನಂ.—ಎನ್ನ ಬಗೆ ನಿಮ್ಮಳವೋ ನಿಮ್ಮಳವಲ್ತೊ ಅರಿಯಲ್ ‡ ನಿಮ್ಮಳವಲ್ತು ‡ ಸರ್ವಚೈತನ್ಯಸ್ವರೂಪಂ ಪರಶಿವನೆ ಬಲ್ಲಂ. ಅದನೆಲ್ಲಂ ನಿನಗೆ ನಿರವಿಸಲೇಂ? ಬವರದೊಳ್ ಎನ್ನ ಬೀರಮಂ ನೋಡಲ್ ನಿನಗೆ ಆಸೆಯಿರ್ಪೊಡೆ ನೀನೀಗಳ್ ಸಿದ್ಧನಾಗು. ನಿನಗೆ ಅನಿತು ಅದಟಿಲ್ಲದೊಡೆ ನಿನ್ನ ಈ ನೆರವಿಯೊಳ್ ಆರನಾದೊಡಂ ಕಳಿಪು. ಅಂತುಮಿಲ್ಲದೊಡೆ ಗುರುಗುಮ್ಮನೆ ಮೊಗಮಂ ‡ ಝುಂಪಾಳದಿಂ ‡ ಬಾಸಣಿಸಿಕೊಂಡು ತೊಲಗು. ಇನ್ನುಂ ನಿನ್ನ ಉದ್ದುರುಟುತನವಂ ಸೈರಿಸಲಾರೆಂ.

ಪರಮೇಶ್ವರಂ—ಎಲೆ ಎಗ್ಗನೆ! ನಿನ್ನ ತ್ರಪದಿರವಂ ನೋಡಿದುದಾಯ್ತು. ಇಂ ನಿನ್ನ ಬೀರಮಂ ನೋಡವೇಳ್ಕುಮೋ? ಅಕ್ಕಟರಿಕ್ಕಟಂ ನೀನದೇಕೆ ಮಿಕ್ಕುನುಡಿದಪೆ? ನೀನಂತು ವೀರಮುಲ್ಲನಾಗೊಡೆ ಕಾಳೆಗದೊಳ್ ಕೈಯ ಬೀರಮಂ ತೋರ. ಬರಿದಪ್ಪ ನಿನ್ನ ಬಾಯ ಬೀರಮಂತಿರ್ಕೆ. ಮಿಳ್ತುಮಂ ಪುಲ್ಗಬಗೆವನಾಂ ನಿನ್ನಂ ಲೆಕ್ಕಿಪೆನೇ.

---

ನಿಮ್ಮಳವಲ್ತು—ನಿನಗೆಶಕ್ಯವಲ್ಲ, ಝುಂಪಾಳ—ಮುಸುಕು.

ಅರ್ಜುನಂ - ಕೀಳಾದ ನಿನ್ನೊಡನೆ ಕಾಳಗಮಂ ಮಾಳ್ಪುದು ಎನಗೆ ಲಜ್ಜಾಕರಂ. ಆದೊಡಂ ನಿನ್ನ ಬಿಂಕದ ಬೆಡಂಗಿನ ನುಡಿಗಳಂ ಕೇಳ್ದು ಸೈರಿಸಲಾರದೆ ಒಪ್ಪುಗೊಂಡಪೆಂ.

ಪರಮೇಶ್ವರಂ. ಎನ್ನೊಡನೆ ಕಾಳಗಂ ನಿನಗೆ ಲಜ್ಜಾಕರಮೋ? ಅದೀಗಳಲ್ತು, ಮುಂತೆ. ಇರ್ಕೆ. ಮೊದಲೇಂ ಬಿಲ್ಗಾಳಗಮೋ? ತೋಳ್ಗಾಳಗಮೋ? ಇಲ್ಲಿಯೋ? ಇನ್ನೆಲ್ಲಿಯಾನುಂ ಪೋಪಮೋ?

ಅರ್ಜುನಂ -ಪಾವನಪಪ್ಪ ಈಯೆನ್ನ ತಪದ ತಾಣಮಂ ನಿನ್ನಡಿಗಳ ತುಳಿತದಿಂ ಪೊಲೆಗಿಡಿಸಲೊಲ್ಲೆಂ. ಅದರಿಂ ನಡೆ ಅತ್ತಣ್ಗೆ ಪೋಪಂ.

ಪರಮೇಶ್ವರಂ.- ಎನ್ನಡಿಗಳ ತುಳಿತದಿಂ ನಿನ್ನೀತಪದ ತಾಣಂ ಪೊಲೆಗಿಡುವುದೋ? ನಿನಗೆ ಇನ್ನುಂ ಅರಿಯುಮೆ ಪಿಂಗದು. ನಡೆ ನೀನೊಲ್ವೆಡೆಗೆ ಪೋಪಂ.

(ಎಂದೆಲ್ಲರುಂ ತೆರಳ್ದರ್).

— ಇಂತಿದು ಷಷ್ಠಾಂಕಂ. —

## ಸಪ್ತಮಾಂಕಂ.

(ಬಳಿಕೆ ನಾರದಂ ಪುಗುವಂ).

ನಾರದಂ -ಪರಾತ್ಪರನಪ್ಪ ಪರಮೇಶ್ವರಂ ಭಕ್ತಾನುಗ್ರಹೇಚ್ಛೆಯಿಂ ಕೈರಾತವೇಷಮಂ ಕೈಕೊಂಡು ಇಂದ್ರಕೀಲಗಿರಿಯೊಳ್ ಇಂದು ತನ್ನ ಪರಮಭಕ್ತನೆನಿಪ ಅರ್ಜುನನೊಡನೆ ಕಾಳಗಮಂ ಮಾಡುತಿರ್ದಪಂ. ಅಪೂರ್ವಮಂ ಈ ಕಾಳಗಮಂ ನಿರುಕಿಸಲ್ ಸಗ್ಗಿಗರೆಲ್ಲರುಂ ಗಗನಾಂಗಣದೊಳ್ ಇಡಿಕಿರಿದು ನೆರೆದಿರ್ಪರ್. ಇನ್ನೆವರಂ ಆಂ ಅತ್ತಲೆ ಇರ್ದು ಅವರಿರ್ವರ ಬಿನ್ನಣದ ನುಡಿಮುರುನುಡಿಗಳಂ ಅಣಿಯರಂ ಆಲಿಸುತ್ತುಂ ಕಾಳಗಮಂ ಸೋಜಿಗದಿಂ ಚವಲಂಬಮಿಕ್ಕದೆ ಮಾಲಿಸುತಿರ್ದೆಂ. ಎಳ್ಳನಿತುಂ ಎಡೆಯಿಲ್ಲದಾ ಸಂದಣಿಯೊಳ್

ಅರಿಯುಮೆ-ಅಜ್ಞಾನ. ಚವಲಂಬಂ-ರೆಪ್ಪೆ,

ನಿಲಲಾಗದೆ ಈ ನೆಲಕೆ ಇಳಿದುಬಂದೆಂ. ಮೇಲೆ ದೂರದೊಳತ್ತಲ್ ನೋಳ್ಪುದರಿಂ ಇತ್ತಲ್ ಸರಿಸದೊಳ್ ನಿಂದುನೋಳ್ಪುದು ಮೇಲೆನಿಕುಂ. ಅದರಿನಾಂ ತಿರಸ್ಕರಣವಿದ್ಯೆಯಿಂ ಮರೆಗೊಂಡು ಸಾಕ್ಷಾತ್ಪರಮೇಶ್ವರನ ಪಕ್ಕದೊಳ್ ನಿಲ್ತು ನೋಡಿದಪೆಂ. (ಎಂದು ತಿರುಗಿನೋಡಿ) ಅದಾರೆನ್ನ ಮುಂದೆ ಬರುತಿರ್ಪ್ಪಂ? (ನಾಡೆ ನೋಡಿ) ಆಃ ! ಗಂಧರ್ವವಲ್ಲಭಂ ವೀಣಾವಾದನದೊಳ್ ಸುಹಸ್ತನೆಂದು ಪೆಸರ್ವೆತ್ತ ಸುಹಸ್ತಂ. ಇದೇಂ ಎನ್ನಂ ನೋಡಿ ತಾನುಂ ನೆಲಕಿಳಿದು ಬಂದನೋ? ಇಂತೆಯೇ ಬರ್ಪ್ಪರಂ ನೋಡಿ ಮತ್ತೊರ್ವರುಂ ಬಂದು ಸೇರೆದೊಡೆ ಇತ್ತಲುಂ ನಿಲಲ್ ಎಡೆ ದೊರೆಕೊಳ್ಳದು.

(ಬಳಿಕ ಸುಹಸ್ತಂ ಪುಗುವಂ)

ಸುಹಸ್ತಂ.-(ದೂರದೆ ನೋಡಿ) ಆಃ ! ಮಹಾತ್ಮರಾದ ನಾರದರ್. ಅದೇ ನಿವರಿತ್ತಲ್ ? (ಬಳಿಸಾರ್ದು) ಪೂಜ್ಯರ್ಗ್ಗೆ ವಂದಿಪೆಂ.

ನಾರದಂ –ಸುಹಸ್ತನ ! ಜಯಶೀಲನಾಗು. ಅದೆಲ್ಲಿಂ ಬಂದೈ ನೀಂ?

ಸುಹಸ್ತಂ –*ಕಿನ್ನೆಲದ ನಾಗರಾಜನ ರಾಜಧಾನಿಯಿಂ.

ನಾರದಂ – ಅಂತೋ ? ಅಂಬರದಿಂ ಇಳಿತಂದನೆಂದರಿತಿರ್ದ್ದೆಂ. ಅದೇಂ ಅತ್ತಲ್ ?

ಸುಹಸ್ತಂ –ಪೂಜ್ಯರಾಲಿಪುದು. ನಾಗರಾಜಂ ತನ್ನ ಮಂದಿರದೊಳ್ ಬಳೆದ ಅದೊಂದುಕ್ಕೆವದ ಸದದೊಳ್ ಎನ್ನ ಗಾಯನಮುಂ ಕೇಳಲಾಸೆವಟ್ಟು ಪಲತೆರದೊಳೆನ್ನಂ ಬೇಡಿದಂ. ಅದರಿಂ ಆನತ್ತಲೆಯ್ದಿ ಬಂದೆರಳ್ದಿನಂ ಗಾನಸಂರಂಭದೊಳಿರ್ದ್ದು ಮೆಚ್ಚುಗೊಂಡು ಬಳಿಕೆ ಅಲ್ಲಿಂ ಪೊರಮಟ್ಟು ಸಗ್ಗಕೆ ಸಾರುತಿರ್ದ್ದಪೆಂ.

ನಾರದಂ –ಸುಹಸ್ತನ ! †ಗಾನಸುಪ್ಪ‡ ಗಾನವಿದ್ಯೆಯೊಳ್ ಪಾರಂಗತನಾದ ನಿನ್ನ $ಆಣತಿಯುಂ$ ಮೆಚ್ಚದರಾರ್ ? ಆ ನಾಗರಾಜಂ ಗಂಧರ್ವರಾಜನಂ ನಿನ್ನಂ ಕರೆಯಿಸಿಕೊಂಡು ಸನ್ಮಾನಿಸಿದುದು ರಸಿಕ

*ಕಿನ್ನೆಲದ–ಪಾತಾಳದ. †ಗಾನ–ಗಹನ. $ಆಣತಿಯುಂ–ಗಾನವನ್ನು.

ಜನಶಿರೋಮಣಿಗಾತಂಗೆ ವಲಂ ಗೌರವಂ. ನೀನುಂ ಬಿಂಕಂಗೊಳ್ಳದೆ ಆತನ *ಬೇಳ್ಕೆಯುಂ* ಅಳ್ತಿಯಿಂ ಒಪ್ಪುಗೊಂಡುದು ವಿನಯಗುಣೋಜ್ಜ್ವಲಂಗೆ ನಿನಗೆ ಭೂಷಣಂ. ಇರ್ಕ್ಕೆ. ಇದೆಲ್ಲಮುಂ ಪೆರತೊಂದು ದಿನಂ ಸಗ್ಗದೊಳ್ ಅವ್ಯಗ್ರತೆಯಿಂ ವಿಚಾರಿಪೆಂ.

ಸುಹಸ್ತಂ. ಆದೊಡೆ ಪೂಜ್ಯರ ಮನವಿಂದು ವ್ಯಗ್ರಮಾಗಿರ್ದಪುದೆನೆ ತೋರುಗುಂ.

ನಾರದಂ.--ಸುಹಸ್ತನೆ ! ಅಪ್ಪುದು. ನಿನಗೆ ಇಂದಿನ ಸುದ್ದಿಯಾವುದುಂ ತಿಳಿಯದೋ ?

ಸುಹಸ್ತಂ.–ತಿಳಿಯೆನೇನುಮಂ.

ನಾರದಂ –ಅಂತಾದೊಡೆ ಮೇಲೆನೋಡು ಗಗನಾಂಗಣಮಂ.

ಸುಹಸ್ತಂ.-(ನೋಡಿ) ಇದೇನಿಂದು ಕೌತುಕಂ !

ಕಂ ॥ ತುಂಬಿತುಳುಂಕಿರೆ ಕಳನೀ |
ರಂಬರತಳವೆಂಬ ವಿಮಳಕಮಳಾಕರದೊಳ್ ||
ಗುಂಬದೆ ಕಣ್ಗೊಳುತೋರಂ |
ತಿಂಬಾಗಿರ್ದಪುವು ಸುರಮುಖಾಂಬುರುಹಂಗಳ್ || ೧೬೦ ||

ಇದೇನಿಂದು ಆನಂದಸಂರಂಭಂ ? ಪೂಜ್ಯರೊಸೆದು ಬೆಸಸವೇಳ್ಕುಂ.

ನಾರದಂ.–ಇಂದು ಈಯಿಂದ್ರಕೀಲಗಿರಿಯೊಳ್ ಪರಮೇಶ್ವರಂಗಂ ಅರ್ಜುನಂಗಂ ಕೊಳುಗುಳಂ ಬಳೆದಪುದು.

ಸುಹಸ್ತಂ --(ಬೆಕ್ಕಸಂಗೊಂಡು) ಏಂ ಕಿಚ್ಚಿನೊಡನೆ ಮಿಡಿತೆಗೆ ಪೋಣರ್ಕೆಯೋ ? ನೇಸರೊಡನೆ ಕಳ್ತಲೆಗೆ ಪೋರಾಟಮೋ ? ಮಹಾಬಲನೊಡನೆ ಮುಗಿಲ್ಗೆ *ಪರಿಮರಿಯೋ ? ಮಾಸಿಂಗನೊಡನೆ ನರಿಗೆ ಸರಸಮೋ ? ಲೇಸಾಯ್ತು. ಪರಮೇಶ್ವರನೊಡನೆ ಅರ್ಜುನಂಗೆ ಎಂತು ಕೊಳುಗುಳಂ.

---

ಬೇಳ್ಕೆಯುಂ -ಪ್ರಾರ್ಥನೆಯನ್ನು ೧೬೦ ಗುಂಬದೆ–ಸಂದಣಿಯಿಂದ, ಪರಿಮರಿ-ಆಟ

ನಾರದಂ. ಅಪ್ಪುದಪ್ಪುದು.

ಸುಹಸ್ತಂ.-ಪ್ರಾಜ್ಞರೆ ! ಅರ್ಜುನಂ ಪರಮೇಶ್ವರನೊಡನೆ ಅಕಟ ಪಗೆಗೊಂಡನೇ ? ಅದೆಂತುಗಡ ಅರ್ಜುನಂಗೆ ಸ್ವಸ್ತಿಯಕ್ಕುಂ ?

ನಾರದಂ.-ಸುಹಸ್ತನೆ ! ಅಂತಲ್ತು. ಅತ್ಯಾಹಿತಂಗೊಂಡು §ವಿಹಸ್ತನಾಗದಿರ. ಮಹಾಮಹಿಮನಾದ ಮಾದೇವನೊಡನೆ ಪಾರ್ಥಂ ಪಗೆದು ಬರ್ದುಕಲಾರ್ಪನೆ ? ಮುಂ § ಆಕಂದುಗೊರಲನೊಡನೆ ಪಗೆದರ ಪಾಡುಗಳೇನಾದುವು ನೀನರಿಯಾ ?

ಸುಹಸ್ತಂ.-ಆದೊಡೆ ಮತ್ತೇಂ ? ಬೆಸಸುವುದು.

ನಾರದಂ ತಪವಿರುತಿರ್ದ್ದ ಬಕುತನಂ ತಾನುದ್ಧರಿಸಲೆಂದೇ § ಆ ಪಂದಲೆವಚ್ಚಂ § ಇಂತು ಬಿನದಂಬಡುವನೆಂದರಿವೆಂ.

ಸುಹಸ್ತಂ. ಆಹರೆ §ಗಂದರಗಿವಿಯಂ§ ಏಂ ಭಕ್ತಾನುಗ್ರಹತತ್ಪರನೋ ! ಅಕ್ಕೆ. ಧನಂಜಯಂ ಎಂತು ಕಂಡು ಕಂಡು §ಐಮೊಗನೊಡನೆ ಕಾಳೆಗಂಗೆಯ್ಯಲ್ ಅದೇಂ ಧೈರ್ಯದಿಂ ತೊಡಗಿದಂ ! ಕಿಚ್ಚಂ ಅರಿತುಂ ಕೆಯ್ಯೊಳ್ ಕಿಟ್ಟುವುದೇ ?

ನಾರದಂ.- ಬಾನ್ನವಿರಂ ನಿಜರೂಪದೊಡನೆ ಜಿಷ್ಣುವಿಂಗೆ ಮಾರಾಂತನೆಂದರಿತೆಯೋ ?

ಸುಹಸ್ತಂ.-ಪೆರತೇಂ ?

ನಾರದಂ.- §ಗೊಂದೆವಳಯಿಗೆಯಂ§ ಲೀಲಾಕಿರಾತನಾಗಿ ಇದಿರ್ವಂದು ಕಾಳೆಗಂಗೆಯ್ಯುತಿರ್ದಪಂ.

ಸುಹಸ್ತಂ.-ಆದೊಡೆ ಕಾಳೆಗವಿನ್ನುಂ ಬಳೆಯುತಿರ್ದ್ದಪುದೋ ?

ನಾರದಂ -ಅಪ್ಪುದು.

---

ವಿಹಸ್ತಂ-ವ್ಯಾಕುಲ; ಪಂದಲೆವಚ್ಚಂ-ಹಸಿದಾದತಲೆಗಳೇ ಆಭರಣವಾಗುಳ್ಳವನು (ರುಂಡಮಾಲೆಗಳ ಧರಿಸಿದವನು) ಗಂದರಗಿವಿಯಂ-ಗಂಧರ್ವಗಾನವೇ ಕಿವಿಯಲ್ಲಿಉಳ್ಳವನು; ಐಮೊಗಂ-ಐದುಮುಖಗಳುಳ್ಳವನು (ಪಂಚವಕ್ತ್ರ) ಗೊಂದೆವಳಯಿಗೆಯಂ-ವೃಷಭಧ್ವಜ.

ಸುಹಸ್ತಂ-ಪೂಜ್ಯರ್ ಏಕೆ ಇತ್ತಲ್ ಬಿಜಯಂಗೆಯ್ದುದು ?

ನಾರದಂ-ಸುಹಸ್ತನೆ! ಇನ್ನೆಗಂ ಬಾನೊಳ್ ನಿಂದು ನೋಡುತಿರ್ದೆಂ. ಅತ್ತಲ್ ‡ಚೌದೆಸೆಯೊಳಂ ಇಡಿಕಿರಿದ ‡ಬೋಳಯರ ‡ಕಿಕ್ಕಿಂದದೊಳ್ ನಿಲಲಾಗದೆ ಇತ್ತಲ್ ಇಂಬಿನಿಂದೆ ನಿಂದುನೋಳ್ಪಂ-ಎಂದು ಬಂದೆಂ.

ಸುಹಸ್ತಂ.-ನೀಂ ಬಸೆದೊಡೆ ಆನುಂ ‡ಎಳೆದೇರನ‡ ಬಿನದಮಂ ಇನಿತು ಕಣ್ಣಾರೆಕಂಡು ಧನ್ಯನಪ್ಪೆಂ.

ನಾರದಂ.-ಅಕ್ಕೆ, ಬಾರೆನ್ನೊಡನ.

ಸುಹಸ್ತಂ.-ಆಕೊಳುಗುಳದ ಕಳವೆತ್ತಲ್ ?

ನಾರದಂ.-ಇದೆಕೊಳ್ ಇತ್ತಲ್ ಅನತಿದೂರದೊಳ್.

ಸುಹಸ್ತಂ.-ಆದೊಡ ‡ಈಗಾವರಂ ಅತ್ತಣ್ತೊ ?

ನಾರದಂ.-ಅಪ್ಪುದಪ್ಪುದು.

ಸುಹಸ್ತಂ.-ಪೂಜ್ಯರೆ! ಇನ್ನವರಂ ನಡೆದ ಆಬವರದ ಬಗೆಯಂ ಇನಿತೆನಗೆ ದಯುದೆ ನಿರಪಿಸವೇಳ್ಕುಂ.

ನಾರದಂ-ಪೇಳ್ತು ಮೀರಿತು. ಎನ್ನ ಮನದ ಇರವೆಲ್ಲಮುಂ ಅತ್ತಲೆ ನಾಂಟಿರ್ಕ್ಕುಂ. ಏಗೆಯ್ವೆಂ ? ಆದೊಡಂ ಸಂಗ್ರಹಿಸಿ ಇನಿತಂ ನುಡಿದಪೆಂ; ಕೇಳ್. ಮೊತ್ತಮೊದಲ್ ಬಂದೆಕ್ಕಲನ ದೂಸರಿಂ ಇರ್ವ್ವರ್ಗ್ಗಂ ಬಿನ್ನಣದ ವಾಗ್ವಾದಂ ನಡೆದುದು. ಸಸಿದಲೆಯುಂ ತಾಂ ‡ಈಸರನೆಂಬುದಂ ಕೆಲವಾನುಂ ಚದುರ್ನ್ನುಡಿಗಳಿಂ ಅರಿಪಿದೊಡಂ ಮಾಯಾಮೋಹಿತಂ ಆ ಅರ್ಜುನಂ ಬಗೆಯದಾದಂ. ಬಳಿಕಿರ್ವ್ವರುಂ ಪಲಕಾಲಂ ‡ಪುಣುಂಬಂ‡ ಅಳುಂಬಂ ಏಸಾಡಿ ಕಾದಿದರ್. ಕಿರೀಟಿ ಪೊಸ ಮಸೆಯ ಕೋಲ್ಗಳಿಂ ಇಚ್ಚೆಯನಿತು ಎಚ್ಚೊಡಂ ‡ಗನಹಂ‡ ಅಣಂ

---

ಚೌದೆಸೆ- ನಾಲ್ಕುದಿಕ್ಕು, ಬೋಳೆಯರ- ದೇವತೆಗಳ. ಕಿಕ್ಕಿಂದ-ಕಿಷ್ಕಿಂಧ. ಎಳೆದೇರನ-ಈಶ್ವರನ (ಭೂಮಿಯೇ ರಥವಾಗುಳ್ಳವನು.) ಗಾವರಂ-ಗದ್ದಲ. ಈಸರಂ-ಈಶ್ವರ; ಪುಣುಂಬಂ-ಬಾಣವನ್ನು, ಗನಹಂ-ಈಶ್ವರನು;

ಮಿಡುಕದೆ ನಿಂದಿರೆ ತಾಂ ಸೋಜಿಗಂಗೊಂಡು ತನ್ನ ಕೋದಂಡದ ತಿರುವಂ $ ತೆಗೆನೆರೆದು $ ನೆರೆ ಸರಲ್ಗಳನೆಚ್ಚೊಡಂ $ ಬಿಲ್ಲನಿವಂ $ ಅಲ್ಲಾಡಿದನಿಲ್ಲವೆಂದು ಮಾಮಸಕಂಗೊಂಡು ಎಕ್ಕೆಕ್ಕೆಯಿಂ ಏಸಾಡಿ ಬೇಸರ್ತಂ.

ಸುಹಸ್ತಂ.-ಬಳಿಕೆ ಬಳಿಕೆ ?

ನಾರದಂ-ಬಳಿಕೆ ಕಟ್ಟಕಡೆಗೆ ಪಾರ್ಥನ ಸರಲ್ಗಳ್ ಮರಲದೆ ಅಭವನೊಳೆ ಅಡಂಗುವುದುಂ ಧನಂಜಯುಂ ತನ್ನ ಅಕ್ಷಯಮಪ್ಪ ದಿವ್ಯ ಬಾಣಂಗಳ್ ಮರಲ್ದು ತನ್ನೆಡೆಗೆ ಬಾರದಿರ್ಪುದಂ ಬಗೆದು "ದಲ್ ಈತಂ ಕಿರಾತನಲ್ತು. ಆವನೊ ದೇವಂ" ಎಂದು ಬಗೆಯೊಳ್ ತರಿಸಂದು ಉತ್ತರಕ್ಷಣದೊಳ್ ಮಾಯಾಮೋಹಿತನಾಗಿ ಪಟ್ಟುವೆರ್ಚಿ "ಆವನಾದೊಡೇಂ ? ಎನ್ನ ತಪಕೆ ಎಡರಂ ಬಡರಿಸಿದ ಇವನಂ ಈಗಳೆ ಕೊನೆಗಾಣಿಸದೆ ಬಿಡೆಂ" ಎಂದು ಪೂಣ್ದು ಕಿಡಿಕಿಡಿವೋಗಿ ಕರುತ್ತಿರಿದು ಬಿರಬಿರನೆ ತೆಗೆದೆತ್ತಿ ಬೀಸಿದ ತನ್ನ ಗಾಂಡೀವದಿನೆ ಪೊಯ್ದಪ್ಪಳಿಸಿದಂ.

ಸುಹಸ್ತಂ.-ಶಿವಶಿವಶಿವ ! ಅಗ್ಗಳದ ಬಗ್ಗನೊಳ್ ಎಂತಪ್ಪ ತಪ್ಪಂ ಎಸಗಿದನೆಗ್ಗಂ !!

ನಾರದಂ.-ತನ್ನ ಪರಮಭಕ್ತನ ತಪ್ಪಂ ಲೆಕ್ಕಿಪನೆ ಪರಮ ಕರುಣಾಶಾಲಿ ಶೂಲಿ ?

ಸುಹಸ್ತಂ.-ಬಳಿಕೆ ಬಳಿಕೆ ?

ನಾರದಂ-ಬಳಿಕೆ ಏನೆಂಬೆಂ ! ಪಾರ್ಥನ ಧನುಷ್ಪ್ರಹಾರದಿಂ ಅರುಮೊಗನಯ್ಯನ ನೆತ್ತಿಯೊಳ್ ಝಲ್ಲನೆ ನೆತ್ತರೆತ್ತಂ ಪೊನಲಿಟ್ಟುದು. ಅದಂ $ ಸಬ್ಬಾಣಿ $ ಕಂಡು ತಳಮಳಂಗೊಂಡು ಕೆಯ್ಯೊಳಮುಂಕಿ ಪಿಡಿದು ಸೆರಂಗಿನಿಂ ಒತ್ತಿದಳ್.

ಸುಹಸ್ತಂ.-ಪಲುಗುಣಂ ಇಂತಪ್ಪ ತಪ್ಪನೆಸಗಿದೊಡಂ ದೇವಂ $ ಎಣ್ಮೆಯ್ಯಂ $ ತಾಂ ಕೆಮ್ಮನಿರ್ದನೇ ?

---

ತೆಗೆನೆರೆದು– ಆಕರ್ಣಾಂತವಾಗಿ ಸೆಳೆದು ; ಬಿಲ್ಲಂ– ಬೇಡನು ; ಸಬ್ಬಾಣಿ– ಶರ್ವಾಣಿ ; ಎಣ್ಮೆಯ್ಯಂ–ಅಷ್ಟಮೂರ್ತಿ.

ನಾರದಂ.–ಕೆಮ್ಮನಿರದೇಗೈವಂ ಮಾದೇವಂ? ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ?

ಸುಹಸ್ತಂ.–ಆಯ್ತು; ಬಳಿಕ್ಕೆ?

ನಾರದಂ.–ಬಳಿಕ್ಕೆ $ ಕವಡಿನ ಬಿಲ್ಲಂ ಪೊಂಬೆಟ್ಟವಿಲ್ಲಂ $ ಆ ಕಿರೀಟಿಯ ಬಿಲ್ಲಂ ತನ್ನೊಳ್ ಸಾಯುವಾಗಿಸಿಲ್ಲವೆನಿಸಿದಂ.

ಸುಹಸ್ತಂ.–ಬಳಿಯುವುವನೇಗೆಯ್ದಂ?

ನಾರದಂ.–ಬಳಿಯುಂ ಸವ್ಯಸಾಚಿ ಕಿಡಿಕಿಡಿವೋಗಿ ಈ ಕೆಯ್ಯ ಬಾಣನಾದೊಡಂ ಈ ಬೂಳನ ಬಾಳಂ ಪೋಳಾಗಿಪೆನೆಂದು ತನ್ನಾ $ ಥಾಳದ $ ಬಾಳಂ ಝಳಝಳಪಿಸುತೆ $ ಬಾನ್ನವಿರನಂ $ ಇರ್ಕ್ಕಡಿಗೆಯ್ಯಲ್ ಮೇಲಣ್ಗೆತ್ತಿದಂ.

ಸುಹಸ್ತಂ.–ಲೇಸಾಯ್ತು. ಬೀಭತ್ಸುವಿನ ಅರಿಯುವೆ ಪಿಂಗದಾಯ್ತೇ? ಬಾಳಂ $ ಬಾಂಬೊಳಲುರಿಕನಂ $ ಪೊಯ್ದನೋ?

ನಾರದಂ.–ಪೊಯ್ದನಿಲ್ಲಂ. ಪೊಯ್ವನಿತರೊಳ್ ಕೆಯ್ಯ ಬಾಳ್ ಕಣ್ಮಯುವಾಯ್ತು.

ಸುಹಸ್ತಂ.–ಅರರೆ! ಧನಂಜಯಂ ಇನ್ನೇಗೈದಂ?

ನಾರದಂ.–ಬಳಿಕೆ ಧನಂಜಯಂ –

ಕಂ॥ ಈತನ ಮಾಯಾಜಾಲವೊ।
ನೂತನವೆಂದೆನಿಪ ಮರುಳೊ ಕನಸೋ ನನಸೋ॥
ಈತೆರದೊಳ್ ದೌರ್ಭಾಗ್ಯವು।
ದೇತರಿನೆನಗಾದುದಕಟ ತರಿಸಲಲಾರೆಂ॥ ೧೬೧॥

ಆವತೆರದಿಂ ಬಗೆವೊಡಂ ಇವಂ ತನತ್ತು ಮಾಯಾಪ್ರಭಾವದಿಂದಮೆ ಇಂತೆಸಗಿರ್ಪಂ-ಎಂದು ಬಗೆದು ಚಿಂತೆಗಡಪ್ಪಾಗಿರೆ ಗಿರಿಜೆಯರಸಂ.

---

ಕವಡಿನ ಬಿಲ್ಲಂ–ಕಪಟಕಿರಾತನಾದ; ಪೊಂಬೆಟ್ಟವಿಲ್ಲಂ–ಈಶ್ವರನು, (ಮೇರು ಪರ್ವತವೇ ಧನಸ್ಸುಗುಳ್ಳವನು; ಥಾಳದ–ಕಾಂತಿಯ; ಬಾನ್ನವಿರ–ವ್ಯೋಮಕೇಶ ಬಾಂಬೊಳಲುರಿಕ–ತ್ರಿಪುರದಾಹಕ, ೧೬೧. ನನಸೋ–ದಿಟವೋ

ಕಂಡು "ಎಲೆ ಮೊನೆಗಾರ! ಏಕೆ ಬರಿದೆ ಚಿಂತಿಪಯ್? ರಿಕ್ಕಟ ಮಾದುದು ಗಡ ಗೆಲ್ವೆನೆಂಬ ನಿನ್ನ ಪ್ರಾಣ್ಕೆ. ಬಿಲ್ಲಾದೊಡಂ ಬಾಳಾದೊಡಂ ಇರ್ದೊಡೆ ಕೈಕೊಂಡು ಬಾರ. ಇಲ್ಲದೊಡೆ ಎನ್ನನಾದೊಡಂ 'ದೇಹಿ' ಎಂದು ಎರೆಯು; ಈವೆಂ" ಎಂದು ಜರಿದಂ.

ಸುಹಸ್ತಂ.-ಅದಕ್ಕೆ ಕೌಂತೇಯನೇನೆಂದಂ?

ನಾರದಂ.-ಅದಕ್ಕೆ ಕೌಂತೇಯಂ ಚಿಂತಾವೇಗದಿಂ ಹಮ್ಮೈದಂ ಬೋಗಿ ತರದಿಂ ತೆಪ್ಪೆತ್ತು ತಾನೆರ್ದೆಗುಂದದೆ "ಎಲೆ ಗಾರುಡಿಗ! ಕೆಯ್ಯೋಳಾಗದೆ ಮಾಯೆಯಿಂ ಎನ್ನ ಬಿಲ್ಗಣೆಗಳಂ ಕಂವಾಲಂ ಕವರ್ದಯ್. ಆಂ ಇದಕ್ಕೆ ಚಿಂತಿಪೆನೇ? ನಿನಗೆ ಅಸಿತು ಸಾಜವಪ್ಪ ಬಲ್ಮೆಯಿರ್ದೊಡೆ ತೋಳ್ಕಾಳಗಕೆ ನಿಲ್" ಎಂದಂ.

ಸುಹಸ್ತಂ.-ಅಂತಾದೊಡಂ ಪಾರ್ಥನೆರ್ದೆಗಿಡನೆ! ಲೇಸು ಲೇಸು. ಬಳಿಕೆ?

ನಾರದಂ.-ಬಳಿಕೆ ದಪ್ಪಕವಗೆಯುಂ ಆಂ ತಾನೆಂದು ಅನುವರಕೆ ಮುಂನಿಲ್ವ ತನ್ನ ನೆರವಿಯುಂ ತಡೆದು ತಾಂ ಮಾಮುಸಕಂಗೊಂಡು ತಾಗಲ್ ನಿಲ್ವುದುಂ ಮಾದೇವಿ ಬೆದರಿ "ಆಃ! ಇದೇಂ? ಆರ್ಯಪುತ್ರಂ ನಿಕ್ಕುವಂ ಕನಲ್ದಂ, ವತ್ಸಂಗೆ ಇನ್ನೇನುಪಹತಿಯುಕ್ಕುಮೋ" ಎಂದು ಬಗೆದು ಮುರುಕಂಗೊಂಡು ಮಾಮ್ಯೆಮೆವೆತ್ತು ರುದ್ರಮಂತ್ರಮಂ ಜಪಿಸಲ್ ತೊಡಗಿದಳ್.

ಸುಹಸ್ತಂ.-ಬಳಿಕಮೇನಾದುದು?

ನಾರದಂ.- ಬಳಿಕಮೇನಾದುದೋ ಅರಿಯೆಂ. ಆನನಿತರೊಳ್ ಇತ್ತಲ್ ಬಂದೆಂ. ಬಪ್ಪುದುಂ ನೀಂ ಎನಗಿದಿರಾದಯ್. ಆವಿರ್ವರುಂ ನುಡಿಗುಟ್ಟಿದಿನಿತರೊಳ್ ಅತ್ತಲದೇಂ ನಡೆದುದೋ! ಇನ್ನಾನುಂ ತಳ್ವದೆ ನಡೆವಂ.

---

ಅನುವರ-ಯುದ್ಧ.

ಸುಹಸ್ತಂ.-ಪೂಜ್ಯರೆ! ನಿಮ್ಮ ಪೋಗಿಂಗೆ ತಡೆಗೆಯ್ದ ಎನ್ನ ಮಹಾಪರಾಧಮಂ ಮನ್ನಿಪುದು. ಆದೊಡೆ ಮಾದೇವಂ ಮಾನುಸಕಂಗೊಂಡಿರ್ದ್ದನೆಂಬುದರಿಂ ಅದೇನೋ ಮನಕೆ ಕಳವಳಂ ಪಿರಿದಾಗಿರ್ಪ್ಪುದು.

(ಆಗಸದಲ್ಲಿ) ಹಾಹಾ ಅತ್ಯಾಹಿತಂ ಅತ್ಯಾಹಿತಂ !!

ಸುಹಸ್ತಂ.- ಪೂಜ್ಯರೆ! ಇದೇಸಿತ್ತಲ್ ಎಳ್ತರದ ದಂದುಗದ ಗಾವರಂ ಕೊಡಂಕೆಯುಂ ಇರಿಗುಂ!

ನಾರದಂ.-ನಿಲ್ ನಿಲ್ ; ನೀಡುಂ ಬಗೆದು ಕೇಳ್ವಂ.

(ಆಗಸದಲ್ಲಿ ಮತ್ತೆ) ಅತ್ಯಾಹಿತಂ ಅತ್ಯಾಹಿತಂ ! ಕುವರನ ಪೇರೊಡಲಿಂ ಝಳ್ಳನೆ ನೆತ್ತರೊಸರುತಿರ್ದ್ದಪುದು. ಅಕಟ ನೋಡಲಾಗದು.

ಕಂ ‖ ಧೀರಂ ಪರಮೋದಾರಂ ।
ಶೂರಂ ಗಂಭೀರನೂಹಪಾರಾವಾರಂ ‖
ಸಾರಂ ಸುಕುಮಾರಂ ಸ್ವಕು ।
ಮಾರಂಗಮಚಿಂತ್ಯಮಾಪರಾಭವಮಾಯ್ತೇ ‖ ೧೬೨ ‖

ನಾರದಂ -ಆಃ ಇದೇಂ ! ಉಪಕ್ರಮಿಸಿದುದೆ ಪೆರತು ಬಂದೊದವಿದುದೆ ಪೆರತು. ಅತ್ಯಾಹಿತಮೆ ತೋರುಗುಂ. ಇದು ಗಡ ಪರಮೇಶ್ವರನಿಂ ಬಡಿವಡೆದು ನೆತ್ತರಿಂ ತೋದ ಮೆಯ್ಯಂ ಬಳಕೊಂಡ ತನ್ನ ಕುಮಾರನಂ ಕಂಡು ಸಂಭ್ರಾಂತನಾಗಿ ಅಳಲ್ವ ಇಂದಿರನ ನುಡಿ. ಅರರೆ! ಮುನ್ನೇನಾದಪುದೋ. ಮನವಿಲ್ಲಿ ನಿಲ್ಲದು. ನಡೆನಡೆ. ಭೋಂಕನೆ ಪೋಗಿ ಸಮರಾಂಗಣದೊಳ್ ಬಂದೆಡೆ ಮರೆಗೊಂಡು ನಿಲ್ವಂ.

ಸುಹಸ್ತಂ.-ಪೂಜ್ಯರೆ! ಎನ್ನ ಮನದ ಕಳವಳಂ ನಿರ್ನೆರವಲ್ತು.

ನಾರದಂ.-ಸುಹಸ್ತನೆ! ಇರ್ಕೆ. ಎಂದಿಂಗಂ ಅರ್ಜ್ಜುನಂಗೆ ಪೊಲ್ಲದಾಗದು. ಪರಮಕರುಣಾನಿಧಿ ಪರಶಿವನೆಂತಾನುಂ ಪ್ರಸನ್ನನಾದಪನೆಂದರಿವೆಂ.

(ಎಂದಿರ್ವ್ವರುಂ ತೆರಳ್ದರ್)

ಇಂತಿದು ವಿಷ್ಕಂಭಕಂ

(ಬಳಿಕೆ ಚಿಂತಾಕುಲನಾದ ಅರ್ಜುನನುಂ ಕಿರಾತವೇಷಧಾರಿ ಸಪರಿವಾರಂ ಪರಮೇಶ್ವರನುಂ ಪುಗುವರ್)

ಅರ್ಜುನಂ.—ಮುನ್ನಾನೊರ್ಮೆಯುಂ ಪರಮೇಶ್ವರನಂ ಬಕುತಿ ಮಿಗೆ ಪೂಜಿಸೆನೋ? ಪರಮೇಶ್ವರನ ಭಕ್ತರಂ ಕೊರ್ವ್ವಿಪಳದೆನೋ? ಅದರಿನೆ ಮಹೇಶನ ಪಸಾದಂ ಎನ್ನಂ ಕೈವಿಟ್ಟತ್ತು.

ಕಂ॥ ಸಲ್ಲಲಿತಭಕ್ತಿಯಿಲ್ಲದೆ।
ಸಲ್ಲದ ಪೊಲ್ಲಮೆಯೊಳಿರುತದೇಂ ಮೆರೆದೆನೊ ಮುಂ॥
ಬಲ್ಲಂ ಗೌರೀವಲ್ಲಭ।
ನಲ್ಲದೊಡೀಬಣಗುಬಿಲ್ಲನಂ ಗೆಲ್ಲನೆ ನಾಂ॥೧೬೩॥

ಜಗದೊಳ್ ಅರ್ಜುನಂ ವೀರಾಗ್ರಗಣ್ಯನೆಂದು ದೊರೆವೆತ್ತಪೆಸರ್ ಇಂದು ಪೊಳ್ಳಾದುದೇ? ಇಲ್ಲಿಂ ಬಳಿಯಮುಂ ಈ ಬಿಯದನೆ ಅರ್ಜುನಂ ಅರ್ಜುನನೆ ಈ ಬಿಯದನೆಂದೆನಿಪರಕ್ಕುಂ. ಹಾ ಕಿಡುದೆವ್ವವೆ! ಅಗೇ ನೆಸಗಿದಯ? ಎನಗಿಂತಪ್ಪಪಾಡು ಬಂದುದೇ? (ಎಂದು ಚಿಂತಿಸಿ ಎಚ್ಚತ್ತರ್ಜು) ಆಃ! ಕೆಟ್ಟೆಂ ಕೆಟ್ಟೆಂ. ತಪಮುಂ ಗೆಯ್ವಂದು ಮಂತ್ರಮುಂ ಜಪಿಸದೆ ಪರಮೇಶ್ವರನ ಪಾದಾರವಿಂದಂಗಳಂ ಜಾನಿಸದೆ ಈ ಕೀಳನೊಡನೆ ಸೊರ್ಕ್ಕಿ ನುಡಿಗಳನಾಡುತ್ತುಂ ಇಂತು ಕ್ರೋಧಾವೇಶಕಡಪ್ಪಾದೆಂ ಗಡ. ಅದರಿನೆದಲ್ ಎನಗಿಂತಪ್ಪದುರ್ಗತಿ ದೊರೆಕೊಂಡಿತ್ತು. ಅಂತಲ್ಲದೆ ಆನಿಲ್ಲಿಗೆ ಬರ್ಪಂದು ಆರ್ಯಂ ಬುದ್ಧಿವಾದಮುಂ ಎನಗೆ ಉಸಿರ್ದನೆ? ಆತನ ಸದುಪದೇಶವೆಲ್ಲಮುಂ ಬೂದಿಯೊಳ್ ಬೇಳ್ದ ಹವಿಯಂತೆ ಬರಿದಾಯ್ತು ಗಡ! ಬಳ್ಳತಿಕ್ಕೆ. ನಿರ್ದಗ್ಧಾಶ್ರಿತದುಃಖಾರಣ್ಯನಂ ಅಗಣ್ಯಪರಮಕಾರುಣ್ಯನಂ ಸರ್ವಲೋಕಶರಣ್ಯನಂ ವರದಾಗ್ರಗಣ್ಯನಂ ದೇವವರೇಣ್ಯನಂ ಮೊದಲ್ ಬಸೆದೊಳ್ವಂತೆ ಬೇಡಿ ಪಸಾದಂಗೊಂಡು ಇವನುಕ್ಕನೀಗಳ್ ಭಂಜಿಪೆಂ. (ಎಂದು ಸನಿಹದೊಳಿರ್ದ ಮಣ್ಣಿಂ ಶಿವಲಿಂಗಮಂ ಪಣ್ಣಿ ಬಗೆವಗೆಯನರುವೂಗಳಿಂ ಪೂಜಿಸಿಬಲವೆಂದುತುಳಲ್ಗೆಯುಪ್ಪ)

ಕಂ॥ ಪನ್ನಗಭೂಷಣ ವಿನತವಿ ।
ಪನ್ನಗಣೋದ್ಧಾರ ಪರಮಯೋಗಾಮೃತಸಂ ॥
ಪನ್ನಗಮನೇರಿ ತಪವಿ ।
ರ್ಪನ್ನಗನಗ್ಘ್ರಸೆವ ದೇವ ಪೊರೆ ಬಿಡದೆನ್ನಂ ॥ ೧೬೪ ॥

ಪರಮೇಶ್ವರಾ ! ನಿನ್ನಡಿದಾವರೆಗಳಂ ಶರಣ್ವೊಕ್ಕ ನಿನ್ನ ಪರಮಭಕ್ತಂ ಆಂ ಈ ಬಣಗುಬಿಯದನಿಂ ಪರಾಜಿತನಾದೆಂ ಗಡ ! ಇಂತು ಭಕ್ತಪರಾಜಯಂ ಭಕ್ತಪರಾಧೀನಂಗೆ ನಿನಗೆ ಒಪ್ಪುವುದೇ ? ಈಗಳ್ ಈ ಕಿರಾತನಂ ಗೆಲ್ವ ಅದಟಂ ಎನಗೆ ಕರುಣಿಸಿ ಚಿಂತಾಸಾಗರದಿಂ ಎನ್ನಂ ಕೈಗಾಯ್. (ಎಂದು ಪ್ರಾರ್ಥಿಸಿ ಕಿರಾತರೂಪಿಯಪ್ಪ ಪರಮೇಶ್ವರನಂ ನೋಡಿ) (ಆತ್ಮಗತಂ) ಇದೇಂ ?

ಕಂ॥ ಮಂಗಳಲಿಂಗದೊಳಾಂ ನಿಯ ।
ಮಂಗಳನಾಂತರ್ಚಿಸಿಟ್ಟ ಕುಸುಮಂಗಳ ದಾ ॥
ಮಂ ಗಳ ಬಿಯದನ ಬಂಧುರ ।
ಮಂ ಗಳಮಂ ಬೆಳಗುತಿರ್ಪ್ಪುದೇನಿದು ಚೋದ್ಯಂ ॥ ೧೬೫ ॥

ಒಳ್ಳಿತು. ಇನ್ನೊರ್ಮೆ ಈ ಲಿಂಗದೊಳ್ ಕುಸುಮಂಗಳಂ ಪೂಜಿಸಿ ಪರಿಕಿಪೆಂ (ಎಂದಂತುಗೆಯ್ದು)(ನೋಡಿ) ಆಃ! ಈ ಪಾರ್ಥಿವಲಿಂಗದ ಮೇಲೆಡೆ ಪೂಜಿಸಿದ ಕುಸುಮದ ಬಾಸಿಗವೆಲ್ಲಂ ಮುನ್ನಂತೆ ಈತನ ಮುಡಿಯೊಳ್ ಕಾಣ್ಗುಂ. ಈತಂ ಸಾಕ್ಷಾತ್ಪರಮೇಶ್ವರನಲ್ಲ ಬಿಲ್ಲನಲ್ಲಂ. ಅಕಟ! ಜಗದೊಳ್ ಎನ್ನನ್ನಂ ಬಾಂಬನುಂಟೆ ? ಇನಿತುಂ ಬಗೆಯದೆ ಸಲ್ಲದ ಪೊಲ್ಲದ ಬಿರುನುಡಿಗಳಿಂ ಕುರುಂಬನಾಂ ಅಳುಂಬಂ ಕೂರಂಬುಗಳಿಂ ಬಿಲ್ಲಿಂ ಬಲ್ವಿಡಿಯು ಗುದ್ದಿನಿಂ ದೇವನಂ ನೋಯಿಸಿದೆಂಗಡ.

---

೧೬೩. ...ನಗಮಂ-ಜಟ್ಟವನ್ನು; ತಪವಿರ್ಪ-ತಪಸ್ಸಂ ಮಾಡುವ; ಅನ್ನ-ಅಂತಹ. ಗನಗ್ಘ್ರ-ಘನತೆಯುಳ್ಳವರಿಗೆ.(ಇದು ತ್ರ್ಯಕ್ಷರಾತ್ಮಕವಾದ ಯಮಕ) ೧೬೪. ದಾಮಂ-ಮಾಲಿಕೆ, ಗಳ-ಗಡ (ಅಲ್ಲವೆ ಎಂದರ್ಥ)(ಬೆಳಗುತಿರ್ಪುದುಗಳ ಎಂದನ್ವಯವು.)ಬಂಧುರಮಂ ಗಳಮಂ ಸುಂದರವಾದ ಕಂಠವನ್ನು. (ಇದೂ ತ್ರ್ಯಕ್ಷರಾತ್ಮಕವಾದ ಯಮಕ)

ಹಾಹಾ !! ಎನಗೆ ಇನ್ನೇನೆಡರಡಸುಗುವೋ ! ಮುನ್ನೇಗತಿ ? ಎಂದು ಪರಮೇಶ್ವರನ ಸನ್ನಿಧಿಗೆಯ್ದುಂದು) ಎಲೆ ಮಹಾಮಹಿಮ ! ನೀನಾರ್? ನಿನ್ನ ನಿಜರೂಪಮಂ ಎಗ್ಗನೆನಗೆ ತೋರಿ ಕರುಣದಿನುದ್ಧರಿಸು. ಎಂದು ಕಾಲೆಡೆಯೊಳ್ ಬೀಳ್ದಂ)

ಪರಮೇಶ್ವರಂ.–(ತನ್ನ ಪರಿವಾರದೊಡನೆ ನಿಜರೂಪಮಂ ತಾಳ್ದು) ವತ್ಸನೆ! ನಿಳೇಳ್. ಮನದುಬ್ಬೆಗಮಂ ಬಿಡು ಬಿಡು. (ಎಂದು ಪಿಡಿದೆತ್ತಿ) ಆನೇಗಡ ನಿನ್ನ ಇಷ್ಟದೈವಂ. ಈಕೆಗಡ ಗಿರಿಜೆ. ಇವರ್ಗಳ್ಗಡ ಎನ್ನ ಅನುಚರರ್ ಪ್ರಮಥರ್. ಆಂ ನಿನ್ನ ಧೈರ್ಯಮಂ ಶೌರ್ಯಮಂ ಪರಿಕಿಸಲ್ಗಡ ಇಂತುಗೆಯ್ದೆಂ. ಎನ್ನ ಮಾಯೆದಾವಿನಿಂ ಬಿಗಿವಡೆದುದರಿಂ ನೀಂ ಎನ್ನನರಿಯದಾದಯ್ಗಡ.

ಅರ್ಜುನಂ.–(ನೋಡಿ ಸಂತಸಂಗೊಂಡು)

ಕಂ॥ ಜಯಜಯ ಗಿರಿವರಶರಣಾ ।
ಜಯಜಯ ಸುರಪಿನುತಚರಣ ಸಜ್ಜನಶರಣಾ ॥
ಜಯಜಯ ವಿಪದುತ್ತಾರಣ ।
ಜಯಜಯ ನತಭರಣನಿಪುಣ ಕರುಣಾಭರಣಾ ॥ ೧೯೭ ॥

ವೃ॥ ಜಯಜಯ ಶಂಕರಾ ಜಯಕರಾ ಪರಿಪಾಲಿತಪಾದಕಿಂಕರಾ ।
ಜಯಜಯ ಭೀಹರಾ ಭವಹರಾ ಗಿರಿರಾಜಸುತಾಮನೋಹರಾ॥
ಜಯಜಯ ಸಂಹಿತಾಶ್ರಿತಹಿತಾ ಮಹಿತೇಹಿತ ನೀಲಲೋಹಿತಾ।
ಜಯಜಯ ಮೋಹಿತಾವಿರಹಿತಾ ಘನಯೋಗಸಮಾಗಮೋಹಿತಾ ॥

ಜಯಜಯಜಯ ಗಂಗಾನಾಟ್ಯರಂಗೋತ್ತಮಾಂಗಾ ।
ಜಯಜಯಜಯ ಲಿಂಗಾಕಾರವಿಭ್ರಾಜಿತಾಂಗಾ ।
ಜಯಜಯಜಯ ತುಂಗಾನಂದಸಂಪಾದ್ಯಪಾಂಗಾ ।
ಜಯಜಯಜಯ ಸಾಂಗಾಮ್ನಾಯಸಾರೈಕಸಂಗಾ ॥ ೧೯೮ ॥

೧೯೭. ಮೋಹಿತಾವಿರಹಿತಾ – ಮೋಹವುಳ್ಳವನ ಭಾವದಿಂದ ಅತ್ಯಂತವಾಗಿ ಶೂನ್ಯನಾದವನೆ! ಆನಂದಸಂಪಾದ್ಯಪಾಂಗಾ– ( ಸಂಪಾದಿ + ಅಪಾಂಗಾ ) ಆನಂದವನ್ನುಂಟುಮಾಡುವ ಕಟಾಕ್ಷವುಳ್ಳವನೆ !

ಎಲೆ ದೀನದಯಾಳೂ ಪತಿತಪಾವನಾ ಜಗದುದ್ಧಾರಾ ಶರಣಾಗತವತ್ಸಲಾ! ಸತ್ಯಸಂಕಲ್ಪಾ ಗಿರಿಜಾಕಾಂತಾ! ನೀಂ ಎನಗೆ ಬಸೆ.
(ಎಂದು ಪಾರ್ವತೀಪರಮೇಶ್ವರರಂ ಮೂರುಸೂಳ್ ಬಲವಂದು ವಂದನಂಗೆಯ್ದು)

ಕಂ॥ ತಾಮರಸಾಸನಮುಖವಿನ।
ತಾಮರಸಂದೋಹಮಕುಟತಟಜಟಿಲಿತಮು॥
ಕ್ತಾಮರಕತ್ರರಂಜಿತಪದ।
ತಾ ಮರವಟ್ಟಂಗೆ ನನಗೆ ತಿಳಿವನುಮೀರಾ ॥ ೧೬೭ ॥

ಪರಮೇಶ್ವರಂ - ಎಲೆವತ್ಸ ಅರ್ಜುನ!

ಕಂ॥ ಅನುಮಾದ ನಿನ್ನ ತಪಕಂ।
ಘನಭಕ್ತಿಗಮೆಸೆವ ಧೈರ್ಯಕಂ ಶೌರ್ಯಕ್ಕಂ॥
ಮನವೊಲ್ದು ಮೆಚ್ಚಿದೆಂ ನಾಂ।
ನಿನಗೋರಗೆಯಾರೊ? ಫಲ್ಗುನಾ ಮೂಜಗದೊಳ್ ॥೧೬೮॥

ಅರ್ಜುನಂ.-ಎಲೆ ಸರ್ವಲೋಕಶರಣ್ಯ! ಅರಿವಿಲ್ಲದೆಗ್ಗನ ತಪವೇವುದು? ನಿನ್ನ ಸಂಕಲ್ಪವಿಲ್ಲದೆ ಪುಲ್ಲುಮನಲ್ಲಾಡಿಸಲಾಗದ ಪಂದೆಯ ಶೌರ್ಯವೆಂತಪ್ಪುದು? ಸಕಲಕ್ಕಂ ಸರ್ವಚೈತನ್ಯಸ್ವರೂಪಂ ನೀನಗಡ ಕಾರಣಂ ಕರ್ತೃವುಂ. ನಿನ್ನಿಚ್ಛೆಯಿಲ್ಲದೆ ಅದೇಂ ನಡೆಗುಂ? ನಿನ್ನಡಿಯೆಡೆಯೊಳಾನೆಸಗಿದ ಅಪಚಾರಸಹಸ್ರಮುಂ ಕ್ಷಮಿಸು. ಪತಿತನಾದೆನ್ನಂ ನಿನ್ನ ಪಾವನಕೃಪಾದೃಷ್ಟಿಯಿಂ ಪರಿಶುದ್ಧಿಗೊಳಿಸು.

ಕಂ॥ ಕಳನಾಂ ಬಯ್ದೆನೆಚ್ಚೆಂ।
ಚಳಕದೆ ಪೊಯ್ದೆಂ ದಲೆಯ್ದೆ ತಪ್ಪನೆ ಗೆಯ್ದೆಂ॥
ತಿಳಿವಿಲ್ಲದೆನ್ನ ಗೆಯ್ತಕೆ।
ಮುಳಿಯದೆ ಮನ್ನಿಪುದು ಪರಮಕರುಣಾಜಳಧೀ॥ ೧೬೯ ॥

ತಾ-ಕಾಡು, ಮರವಟ್ಟಂಗೆ-ಜಡನಾದ.(ಇದೂ ತ್ರ್ಯಕ್ಷರಯಮಕ.)

ಪರಮೇಶ್ವರಂ.–(ಆಲಿಂಗಿಸಿಕೊಂಡು) ವತ್ಸಾ ಅರ್ಜುನ! "ಸಕಲಕ್ಕಂ ನೀನೆಗಡ ಕಾರಣಂ ಕರ್ತೃವುಂ" ಎಂದು ನೀನೀಗಳ್ ಉಸಿರ್ದೆಗಡ. ಅಂತಿರೆ ಎನ್ನಂ ನೀನೇಂಗೆಯಲಾರ್ಪೆ? ಆರಯೆ ಜಗದೊಳ್ ಆರುಂ ಏನುಮಂ ಎನಗೆ ಗೆಯ್ಯಲಾರರ್. ನೀಂ ಆರಯ್ಯದೆ ಮನದೊಳ್ ಏಕೆ ಕಳವಳಿಪಯ್? ನೀಂ ಎನ್ನ ವಿಷಯದೊಳ್ ಏಂ ತಪ್ಪುಮಂ ಎಸಗಿದವನಲ್ತು. ನಿನಗೆ ಎನಸುಂ ಸುಪ್ರಸನ್ನನಾಗಿರ್ದಪೆಂ.

ಅರ್ಜುನಂ–ಭಕ್ತವತ್ಸಲ! ಇಂದು ಕೈಯಾರೆ ಗಾಂಡೀವದಿಂ ನಿನ್ನ ನೆತ್ತಿಯುಂ ಪೊಯ್ದುಪ್ಪಳಿಸಿದೆಂ. ಏರಿನ್ನುಂ ಕಾಣ್ಬುಗುಂ. ನೆತ್ತರುಂ ಜಿನುಗುತಿರ್ಕ್ಕುಂ. ಆದೊಡಂ ಆಂ ತಪ್ಪನೆಸಗಿದುದಿಲ್ಲವೆಂದೊಡೆ ಜಗಂ ನಂಬುಗುಮೇ?

ಪರಮೇಶ್ವರಂ–ಎಲೆ ತರಳ! ನೀನಿಂತು ಬಗೆವೊಡೆ ನಿನ್ನ ಗಾಂಡೀವದ ಪೊಯ್ತದಿಂ ಎನಗೆ ಆನಂದಂ ಸಮನಿಸಿದಂತೆ ನಿನ್ನ ಘನತಪೋನಿಯಮಂಗಳಿನುಂ ಸಮನಿಸಿದುದಿಲ್ಲಂ. ನಿಕ್ಕುವಂ ನಿನ್ನೊಳೆನಗೆ ನಿಟ್ಟೆಲ್ಲಂ. ನಿನಗೆಕರಂ ಪ್ರಸನ್ನನಾಗಿರ್ದಪೆಂ. ಇದೆಕೊಳ್ ನಿನತು ಗಾಂಡೀವಂ ಸರಲ್ಗಳ್ ಕರವಾಲ್ $ ಪೊಂಜುರಿಗೆ $ ಇವಂ ಕೈಕೊಳ್.

ಅರ್ಜುನಂ.– (ಅವಂ ಕೈಕೊಂಡು) ಮಹಾಮಹಿಮನೆ! ನಿನ್ನ ಬಗೆಯುಂ ಅರಿದವರಾರೊ! ನೀನಪ್ರಮೇಯಂಗಡ.

ವೃ॥ ಮಾನಾಗಂಗಳ್ ತೊಡಂಗಳ್ ಘನಸಿತಭಸಿತೋದ್ಧೂಳನಂ ಮಯ್ಯೊಳೆಲ್ಲಂ। ನೀನೆಂದುಂ ಕೃತ್ತಿವಾಸಂ ಬಗೆವೊಡೆ ವಿಕೃತಂ ನಿನ್ನ ರೂಪಾದೊಡಂ ಮುಂ॥ ತಾನೇ ಸಂಪ್ರೀತಿಯಿಂದಾ ವರಿಸಿದಳುಮಾ ನಿನ್ನ ನೀದೇವಿ ದೇವಾ। ಧ್ಯಾನಾತೀತಂ ಗಡಾ ನಿನ್ನಿರವು ಜಗದೆ ತಾಂ ಭಾವಿಸಲ್ ಬಲ್ಲನಾವೊಂ॥ ೧೩೦॥

ಸಾಸಿನ್ನುರ್ಡಿಗಳನೀಂ ?

ಪೊಂಜುರಿಗೆ–ಚಿನ್ನದ ಕತ್ತಿ

ವೃ॥ ನೀನಾತ್ಮಂ ಮತಿ ಗೌರಿ ತಾನನುಚರರ್ ಪ್ರಾಣಂಗಳೇ ಮೆಯ್ ಗೃಹಂ। ನಾನಾಭೋಗವೆ ನಿನ್ನಪೂಜೆಯನುವಿಂ ನಿದ್ರಿಪ್ಪುದೇ ನಿಚ್ಚಟಂ॥ ಜಾನಂ ಕಾಲ್ನಡೆಗಳ್ ಪ್ರದಕ್ಷಿಣಚಯಂ ಮಾತೆಲ್ಲಮುಂ ಸ್ತೋತ್ರಮಿಂ। ತೇನೇಂ ಗೆಯ್ಮೆಯ ಗೆಯ್ವೆನೆಲ್ಲಮದು ನಿನ್ನಾರಾಧನಂ ಶಂಕರಾ॥ ೧೩೧॥

ದುಃಖಸಾಗರಮಂ ದಾಂಟಿಸಲ್ ಅದೊಂದು *ಪುಟ್ಟೈನಿಪ* ನಿನ್ನ ಅಡಿದಾವರೆಯ ದರ್ಶನದಿನೆನ್ನ ಪುಟ್ಟು ಸಫಲವಾದತ್ತು.

ಪರಮೇಶ್ವರಂ.–ವತ್ಸಾ ! ನಿನ್ನ ಬಯಕೆಯಾವುದು ಪೇಳ್ ಸಲಿಪೆಂ.

ಅರ್ಜುನಂ –ಸರ್ವಜ್ಞಂಗೆ ನಿನಗೆ ತಿಳಿಯದುದಾವುದು ?

ಪರಮೇಶ್ವರಂ – ಅಣುಗ ! ಬವರದೊಳ್ ಪಗೆವರ ಉರ್ಕ್ಕಂ ತಗ್ಗಿಪ್ಪುವ ಪಾಶುಪತವೆಂಬ ಎನತು ದಿವ್ಯಾಸ್ತ್ರಮಂ ಗಡ ನೀಂ ಬಯಸಯ್ ?

ಅರ್ಜುನಂ –ಮಹಾದೇವನೆ ಪೆರತೇಂ ?

ಪರಮೇಶ್ವರಂ –ಅರ್ಜುನಾ ! ನಿನ್ನ ಬಯಕೆಯಂತೆ ಆ ಅಸ್ತ್ರಮಂ ವೀರಂಗೆ ನಿನಗೆ ಅನುಗ್ರಹಿಸಿರ್ದಪೆಂ. ಇದೆಕೊಳ್ ಮಂತ್ರಮಂ ಉಪದೇಶಿಪೆಂ. ಅವಧರಿಸು. (ಎಂದು ಮಂತ್ರಮಂ ಕೊಡಂಕೆಯೊಳ್ ಪೇಳ್ದು) ಮೇಲೆ ಗಗನಾಂಗಣಮಂ ಮಾಲಿಸು. (ಎಂದು ಸುಟ್ಟಿಸಿ) ಇದೊಕೊಳವಂ ನಿನ್ನಯ್ಯನಿಂದಿರಂ. ಕೆಯ್ಯೊಳ್ ಬಜ್ಜರಮಂ ಪಿಡಿದು *ಚಾದಂತಮಂ* ನೇರಿ ಬಿನಯದಿಂ ತಲೆವಾಗಿರ್ದಪಂ. ಅವನ ಪಕ್ಕದೊಳ್ ಪರಿವಿಡಿಯಿಂ ಅಗ್ನಿಮುಂತಪ್ಪ ದೆಸೆವಳರ್ ತಂತಮ್ಮ ವಾಹನಂಗಳಂ ಅಡರ್ದು ಬದ್ಧಾಂಜಲಿಗಳಾಗಿರ್ದಪರ್. ಇವರೆಲ್ಲರುಂ ನಿನಗೆ ಇಂದು ಬಗೆವಗೆಯಸ್ತ್ರಂಗಳಂ ಈಗುಂ. ಇನ್ನುಂ ಪಲಂಬರ್ ದಿವಿಜರುಂ ಮಾರಿಸಿಗಳುಂ ಎನ್ನ ಕೈರಾತಲೀಲೆಯಂ ಕಣ್ಣಾರೆ ನೋಡಲೆಳಸಿ ನೆರೆದಿರ್ಪರ್. ಇವರ್ಗೆಲ್ಲರ್ಗಂ ನೀಂ ತುಳಿಲ್ಗೆಯ್. ನಿನಗೆ ವಿಜಯಮಂಗಳಾಶಾಸನಮಂ ಮಾಡುಗೆ.

ಪುಟ್ಟೈ–ನೀರನ್ನು ತಳ್ಳಲು ಸಾಧನವಾದ ಮರದಕೈ. ಚಾದಂತ–ಐರಾವತ.

ಅರ್ಜುನಂ -(ಮೇಲೆನೋಡಿ) ಎಲೆ ಇಂದ್ರಾದಿದೇವರ್ಕಳಿರ! ಮಹಾದೇವನ ಚರಣಕಿಂಕರಂ ನಾಂ ನಿಮಗೆಲ್ಲಂ ತುಳಿಲ್ಗೆಯ್ದಪೆಂ. ನೀವೆಲ್ಲರುಂ ಎನ್ನೊಳೊಸೆವುದು. (ಎಂದಂತು ಮಾಳ್ಪಂ).

(ಆಗಸದಲ್ಲಿ) ವಿಜಯಿ ವಿಜಯಿಭವ ವಿಜಯಿಭವ. ಮಹಾಮಹಿಮನಾದ ಮಹಾದೇವನ ಮಹಾನುಗ್ರಹಮಂ ಪಡೆದ ನಿನಗೆ ನಾವೆಲ್ಲರುಂ ಒಸೆವುದೇಂಗನಂ.

ಪರಮೇಶ್ವರಂ.-ಅರ್ಜುನ ! ಪೆರತೇಂ ?

ಅರ್ಜುನಂ -ಪರಮೇಶ್ವರ ! ನೀಂ ಒಸೆದೊಡೆ ಇಂದಿತ್ತಲ್ ಆರ್ಯಯುಧಿಷ್ಠಿರಾದಿಗಳ್ಗಂ ನಿನ್ನ ಚರಣಾರವಿಂದಂಗಳ ಸಂದರ್ಶನಮಾಗವೇಳ್ಕುಂ-ಎಂದು ಬೇಡುವೆಂ.

ಪರಮೇಶ್ವರಂ -ಅಕ್ಕೆ. ಭ್ರಾತೃವತ್ಸಳಂ ನೀಂ ಇಂತು ಬೇಡುವುದು ತಕ್ಕುದು. ನಿನ್ನ ಬೇಳ್ಕೆಯುಂ ಮೊದಲೆ ಅರಿತ ನಾಂ ಪುರೋಹಿತಭ್ರಾತೃಕಳತ್ರಸಹಿತನಂ ಯುಧಿಷ್ಠಿರನಂ ಇಲ್ಲಿಗಾಗಳೆ ಬರಿಸಿರ್ಪೆಂ. ಇದೆಕೊಳೆಲ್ಲರುಂ ಪುಗುವರ್.

( ಬಳಿಕ ಸಪುರೋಹಿತಂ ಯುಧಿಷ್ಠಿರಂ ದ್ರೌಪದೀಭೀಮಾರ್ಜುನನಕುಲಸಹದೇವರೊಡನೆ ಪುಗುಗುಂ )

ಯುಧಿಷ್ಠಿರಂ.-(ಪರಮೇಶ್ವರನಂ ನೋಡಿ) ಎಲೆ ಪಾರ್ವತೀವಲ್ಲಭನೆ ! ನಿನಗೆ ವಂದಿಪೆವು. (ಎಂದೆಲ್ಲರೊಡನಂತುಮಾಳ್ಪಂ)

ಪರಮೇಶ್ವರಂ ಎಲೆ ಯುಧಿಷ್ಠಿರನೆ ! ನೀಂ ಇಲ್ಲಿಗೆ ಬರಲ್ ಕಾರಣಮೇಂ ?

ಯುಧಿಷ್ಠಿರಂ -ಪರಮೇಶ್ವರಾ! ನೀಂ ಕರುಣಿಸವೇಳ್ಕುಂ. ದ್ವೈತವನದೊಳ್ ಆವಿನಿಬರುಮಿರುತಿರೆ ನೀಮೀಗಳ್ ಚರಣಸಂದರ್ಶನಕೆ ಇಂದ್ರಕೀಲಗಿರಿಗೆ ಬರ್ಪುದೆನುತೆ ಮಹಾದೇವನಾಣತಿಯಾಗಿರ್ಕುಮೆಂದು ಕಳ್ಕನೆ ಅದೊಂದು ಆಕಾಶವಾಣಿಯಪ್ಪುದುಂ ಆಂ ಸಂಭ್ರಾಂತರಾಗಿ ನಿನ್ನ ಅನುಗ್ರಹದಿಂ ಇತ್ತಲೀಬಂದೆವು.

ಪರಮೇಶ್ವರಂ - ಎಲೆ ಯುಧಿಷ್ಠಿರ ! ಅಪ್ಪುದು. ನಿನ್ನ ಈ ಸೋದರನರ್ಜುನಂ ಬಹುಪುಣ್ಯಶಾಲಿ. ಆಂ ಇವನ ಘನತಪಕೆ ಮೆಚ್ಚಿದೆಂ. ಇವನ ಅದಟಂ ಪರಿಕಿಸಲ್ ಶಾಬರವೇಷದಿಂ ಬಂದು ಇವನೊಡನೆ ಕಾಳಗಂಗೆಯ್ದೆಂ. ಇವನ ಶಕ್ತಿಸಾಹಸಂಗಳ್ಗಂ ಮನಮೊಲ್ದು ಈನಿಜರೂಪದಿಂ ಮೆಯ್ದೋರಿ ದಿವ್ಯಾಸ್ತ್ರಮಂ ಅನುಗ್ರಹಿಸಿದೆಂ. ಆನುಂ ಸಹೋದರನೆಂದು ಒಡವುಟ್ಟಿದೊಡಾಯ್ತೇ ? ಇಂತಪ್ಪಂ ಮಹೋದಾರಂ ಸೋದರಂ ಜನ್ಮಾಂತರಗಸುಕೃತವಿಶೇಷದಿನೆ ಗಡ ದೊರೆಗುಂ. ಇನ್ನನಂ ಪಡೆದ ನೀಂ ಧನ್ಯಂ ಮಾನ್ಯಂ. ಈಪದದೊಳ್ ನಿಮಗೆಲ್ಲರ್ಗಂ ಸಂದರ್ಶನಮಂ ಈವುದೆಂದೀಯರ್ಜುನಂ ಎನ್ನಂ ಬೇಡಿದಂ. ನೀವೆಲ್ಲರುಂ ಧರ್ಮಾತ್ಮರ್. ನಿಮಗೆ ದರ್ಶನಮಂ ಈವುದೆನಗೆ ಇಷ್ಟವೆನಿಸೆ ಆನೆ ನಿಮ್ಮಂ ಇಲ್ಲಿಗೆ ಚಣದೊಳ್ ಬರಿಸಿದೆಂ.

ಯುಧಿಷ್ಠಿರಂ - ಎಲೆ ಸಚ್ಚಿದಾನಂದರೂಪನೆ ! ನಿನ್ನ ಚರಣಾರವಿಂದಸಂದರ್ಶನದಿಂ ಅಮಂದಾನಂದತುಂದಿಲರೆಂದೆನಿಸಿದೆವು.

ಕಂ ‖ ಮನಮೆಂಬಲರಲರಿತು ಪಾ ।
ವನವೆನಿಸಿತು ಪುಟ್ಟು ನುತಿಗೆ ಸಂದೆವು ನಾವುಂ ‖
ವಿನುತಂ ಭರತಾನ್ವಯಮುಂ ।
ಘನತರವಾದತ್ತು ಧನ್ಯರಾದರ್ ಪಿತರರ್ ‖ ೧೩೮ ‖

ಅರ್ಜುನಂ.-(ಯುಧಿಷ್ಠಿರನಂ ನೋಡಿ) ಆರ್ಯ ! ಈ ಪರಮೇಶ್ವರನೆಲ್ಲಮಂ ಬೆಸಸಿದಂ. ಇನ್ನಾಂ ಬಿನ್ನವಿಪುದೇನಿರ್ಕ್ಕುಂ !

ಕಂ । ತುಂಗತಪಶ್ಚರಗರ್ಗ* ಮುನಿ ।
ಪುಂಗವರ್ಗಂ* ಬಗೆಯಲಸದಳಂ ತಾನೆನಿಪೀ ‖
ಗಂಗಾಧರನ ದೃಢಾಂಗಾ ।
ಲಿಂಗನಮೆನಗೊದವಿತಿನ್ನದೇಂ ಧನ್ಯನೊ ನಾಂ ‖ ೧೩೯ ‖

ಯುಧಿಷ್ಠಿರಂ.-ವತ್ಸ ! ಭಕ್ತೈಕವತ್ಸಳಂ ಈಮಹಾದೇವಂ ಬಸೆದೊಡೆ ಏನೇನಾಗದಗ್ಗಳದಭ್ಯುದಯಶ್ರೇಯಸ್ಸಾಧನಪಾರಂಪರಿ.

ಪರಮೇಶ್ವರಂ.- ಎಲೆ ಯುಧಿಷ್ಠಿರಮಹಾರಾಜ! ನಿನ್ನ ಈಹಿತಾರ್ಥಮಿನ್ನಾವುದು ?

ಯುಧಿಷ್ಠಿರಂ.-

ವೃ|| ದುರವಾಪಂ ಪರಮಪ್ರಭಾವರೆನಿಪಾ ಪದ್ಮಾಸನೇಂದ್ರಾದಿಗಳ್ಗಂ |
ಪರಮಾನುಗ್ರಹದಿಂ ಪ್ರೊದಳ್ದೆಮಗೆ ನೀನಿಂದೊಲ್ದು ಮೆಯ್ದೋರಿದಯ್ ||
ಪರಮಾಸ್ತ್ರಂ ದೊರೆದತ್ತು ನಿನ್ನ ವಿಳಸತ್ಕಾರುಣ್ಯಸಂಪತ್ತಿಯಿಂ |
ಪರಮಾರ್ಥಂ ಪೆರತಾವುದಿನ್ನೆಮಗೆ ಮೂಲೋಕಂಗಳೊಳ್ ಶಂಕರಾ ||

ಆದೊಡಂ ಈ ಭರತವಾಕ್ಯಂ ಫಲಿಕೆ.

ವೃ|| ಪ್ರಜೆಗಳ್ ಸಂತತಮುಂ ಮುದಂಬಡುಗೆ ತಾಂ ಕಲ್ಯಾಣಸಂಪತ್ತಿಯಿಂ | ನಿಜಧರ್ಮಂಗಳನೇಗಳುಂ ಬಿಡದೆ ತಾಂ ಪಾಲಿಕ್ಕೆ ಭೂಪಾಲಕರ್ || ವಿಜಯಂಬೆತ್ತು ವಿರಾಜಿಸುತ್ತೆ ಸುಕವಿಗ್ರಂಥಂಗಳರ್ಕ್ಯವಗಂ | ಸುಜನರ್ ಪೆರ್ಚುಗೆ ಬಾಲರೊಂದುಗೆ ಕಲಾಭ್ಯಾಸಂಗಳೊಳ್ ನಲ್ಮೆಯಂ || ೧೩೪ || (ಎಂದೆಲ್ಲರುಂ ತೆರಳ್ದರ್)

ಕಂ|| ವರಚಾಮೇಂದ್ರಪ್ರಭವಂ |
ಸುರುಚಿರಕರ್ಣಾಟರಾಜ್ಯಲಕ್ಷ್ಮೀವಿಭವಂ ||
ದೊರೆಕೊಂಡು ನಿತ್ಯಶುಭವಂ |
ವಿರಾಜಿಸುಗೆ ಕೃಷ್ಣನೃಪತಿ ಸುಸುಖಾನುಭವಂ ||

ಕಂ|| ಮಂಗಳಮಯನಾಮಂ ಕಾ |
ಮಂಗಳವಲ್ತೆನಿಸಿತಾವನಂ ಗೆಲ್ವುದು ಸೋ ||
ಮಂಗಳಜಿತಜಳದಂ ಶ್ರೀ |
ಮಂಗಳನೆಮಗೀಗೆ ಸರ್ವಮಂಗಳೆಯಾಣ್ಮಂ ||

ಇಂತಿದು ಸಪ್ತಮಾಂಕಂ.

ಸಂಪೂರ್ಣಂ.

---

ಶ್ರೀ ಪರಮೇಶ್ವರಚರಣಾರವಿಂದಾರ್ಪಿತಮಸ್ತು.

ಸ್ವಸ್ತಿ.

# ಶೋಧನಪತ್ರಂ.



| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಸಭಾಸದಮಹಾಶಯರ್ | ಸಭಾಸದರ್ಮಹಾಶಯರ್ | ೩ | ೨ |
| ಅಮುಚರ್ಗಗುಂ | ಅನುಚರ್ಗಗುಂ | ೪ | ೨೨ |
| ನೃಪಕುಲತಿಲಕಾ | ನೃಪತಿಲಕಾ | ೯ | ೧೧ |
| ಮೊಗೆ | ಮೊಗ್ಗೆ | ೨೧ | ೨೪ |
| ಬಿನ್ನವಿಸುತ್ತ | ಬಿನ್ನವಿಸುತ್ತು | ೨೩ | ೧೦ |
| ನಿನ್ನಯು | ನಿನ್ನಯೆ | ೨೫ | ೨೧ |
| ಕಿರ್ಮ್ಮೀರಸೆನ | ಕಿರ್ಮ್ಮೀರಸೆನ್ನ | ೩೨ | ೪ |
| ಳರವಂ | ಳರವಿಂ | ೩೨ | ೧೭ |
| ಪುರಸರ | ಪುರುಸರ | ೩೩ | ೨೦ |
| ಮಂದಿನಿಸಿಪ್ಪರ್ | ಮಂದೆನಿಸಿಪ್ಪರ್ | ೩೬ | ೨ |
| ಮದುಪ | ಮುದುಪ | ೪೬ | ೧೨ |
| ಅಲರಿಂಚಂಗಂ | ಅಲರಿಚಂಗಂ | ೫೦ | ೧೫ |
| ಎಗಾ | ಎಗ್ಗಾ | ೬೧ | ೧೦ |
| ಪುಗುಗು | ಪುಗುಗುಂ | ೬೭ | ೧ |
| ಭಾಗ್ಯಲಕ್ಷ್ಮೀ | ಭಾಗ್ಯಲಕ್ಷ್ಮಿ | ೬೭ | ೧೬ |
| ಬಲ್ಲದು | ಬಲ್ಲುದು | ೭೩ | ೪ |
| ತಣದಿರನ | ತಣ್ಣದಿರನ | ೯೩ | ೪ |
| ಯುಂಬುದು | ಯೆಂಬುದು | ೧೦೯ | ೧೬,೧೮ |
| ಎಂದಿಗಂ | ಎಂದಿಂಗಂ | ೧೧೧ | ೧ |
| ಸಾಲುಂ | ಸಾಲ್ಗುಂ | ೧೧೭ | ೧೬ |
| ಅಗಳ | ಅಗ್ಗಳ | ೧೨೦ | ೧೪ |
| ಮನವೀಳುಂ | ಮನವೀಳ್ಗುಂ | ೧೨೨ | ೪ |
| ಮಗಳದ | ಮಗ್ಗಳದ | ೧೨೬ | ೧೮ |
| ಕರಯುಸೆ | ಕರೆಯೆಸೆ | ೧೨೭ | ೧ |
| ಮಂದಿಗಂ | ಮಂದಿಂಗಂ | ೧೩೪ | ೨೨ |

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
| --- | --- | --- | --- |
| ನೊಡರಿಸಿಲ್ | ನೊಡರಿಸಲ್ | ೧೪೨ | ೨೩ |
| ಪೆಣಳ್ಗ | ಪೆಣ್ಗಳ್ಗ | ೧೪೩ | ೨೫ |
| ಬಳಗೊಂಡುಂ | ಬಳಕೊಂಡುಂ | ೧೫೬ | ೪ |
| ಭೂಪತಿಯೊ | ಭೂತಪತಿಯೊ | ೧೫೭ | ೧೭ |
| ಬಿಲಣೆ | ಬಿಲ್ಗಣೆ | ೧೭೧ | ೬ |
| ಆದರೆ | ಆದೊಡೆ | ೧೭೬ | ೧೧ |

